# ಬಾಳತೊಡಕು

( ಕಥಾ ಸಂಗ್ರಹ )

ರಾಜಾರಾವ್ ಮಜಲೀಕರ್

ಮೊದಲ ಮುದ್ರಣ . ಜುಲೈ ೧೯೫೪

ಬೆಲೆ ೮ ಆಣೆ

ಸಾಹಿತ್ಯ ಸೇವಾ ನಿಲಯ ಗೋಕಾಕ



# ಮುನ್ನುಡಿ

ದಿನದ ದುಡಿತವನ್ನು ಬೇಸತ್ತು ಮನಸು ಮುದುಡಿದಾಗ ಏನೋ ಹೊತ್ತು ಕಳೆಯಲು ಕಥೆ ಕಾದಂಬರಿಗಳ ಪುಟಗಳನ್ನು ಮಗುಚಿ ಹಾಕಿ, ಆಕಳಿಕೆ ಬಂದಕೂಡಲೆ ಕಣ್ಣು ರೆಪ್ಪೆ ಮುಚ್ಚತೊಡಗಿದಾಗ ಕೈಯಲ್ಲಿಯ ಪುಸ್ತಕ ಆಚೆಗೆ ಬಿಸುಟೆ ನಿದ್ರೆ ಹೋಗುವ ಪರಿವಾರ ಬಹು ಅಂಶ ಓದುಗರದು

ಈ ಪರಿಪಾಠ ಒಳ್ಳೆಯದಲ್ಲವೆಂದು ತೋರುತದೆ ಸಾಹಿತ್ಯ ಜನಜೀವನದ ಪ್ರತಿಬಿಂಬ. ದೈನಂದಿನ ಆಗು ಹೋಗುಗಳ 'ವರದಿ' ಅಲ್ಲದಿದ್ದರೂ ಆ ವಿಷಯ ಕಲಾತ್ಮಕವಾಗಿ ಪ್ರತಿಬಿಂಬಿಸುವ ಕನ್ನಡಿ ಪ್ರತಿ ಸೃಷ್ಟಿ ನಿತ್ಯ ಜೀವನದಲ್ಲಿಯ ಕುಂದು ಕೊರತೆ ಸಾಹಿತ್ಯ ಮುಖಾಂತರ ತುಂಬಿ ತರಬೇಕು. ಇಂದು ಓದುಗರ ಸಂಖ್ಯೆ ಬೆಳೆದಿದೆ ಆದರೆ ಅದರಿಂದ ಪ್ರಯೋಜನ ಪಡೆಯುವವರೆಷ್ಟು ಜನ ?

ಒಂದು ಕಾಲ ಇತ್ತು ರಾಜ-ರಾಣಿಯರ 'ಅರೇಬಿಯನ್ ನೈಟ್ಸ್' ದಂತಹ ಕತೆಗಳನ್ನು ಓದುವ ಕಾಲವೂ ಒಂದಿತ್ತು ಆದರೆ ಆ ದಿನ, -ಆ ಜನ ಇಂದಿಲ್ಲ ಕಾಲಾನುಸಾರ ಪರಿಸ್ಥಿತಿ ಅದಕನುಸಾರ ಸಮಾಜ, ಅದರ ರೀತಿ ನೀತಿಗಳು ಬದಲಾಗುತ್ತ ಹೋಗುತ್ತವೆ.

ಅಂದು ಜನಜೀವನದಿಂದ ದೂರ-ದೂರ, ಬಹುದೂರ ಎಲ್ಲಿಯೋ ಒಂದುಕಡೆ ಪಂಡಿತರ ಸ್ವತ್ತಾಗಿದ್ದ ಅರಮನೆಯಲ್ಲಿ ವಾಸವಾಗಿದ್ದ ಸಾಹಿತ್ಯ ಇಂದು ಜನಜೀವನಕ್ಕೆ ತೀರ-ತೀರ ಹತ್ತಿರವಾಗಿದೆಯಷ್ಟೇ ಅಲ್ಲ, ಜನಜೀವನದ ಉಸಿರಾಗಿದೆ-ಪ್ರತಿಬಿಂಬವಾಗಿದೆ-ಹಾಸು ಹೊಕ್ಕಾಗಿ ಹೆಣೆದುಕೊಂಡಿದೆ.

ಅಂತೆಯೇ ಇಂದು ಎಲ್ಲರ ಹೊಣೆ ಹೆಚ್ಚಿದೆ ಮುಂಜಾವಿನಲ್ಲಿ ಗಾಳಿ ಸೆವನೆ, ಕಾಫಿ ಸ್ನಾನ ಊಟ, ಡ್ರೆಸ್ಸು, ಆಫೀಸಿನ ದುಡಿತ, ಆಮೇಲೆ ಮನೆಗೆ ಬಂದು ಸ್ನಾನ-ಊಟ 'ಏನೋ ಬೇಸರು' ಎಂದು ಹಾಸುಗೆಯ ಮೇಲೆ ಬಿದ್ದು ನಾಲ್ಕು ಸಾಲು ಕಣ್ಣಾಡುದು ಹಾಯಿಸಿ ಮಕ್ಕಳೊಡನೆ ಸುಖವಾಗಿ ದಿನ ನೂಕಿದರೆ ಆಗಲಿಲ್ಲ 'ನಮ್ಮ ಕರ್ತವ್ಯ ಇನ್ನೂ ಇದೆ' ಎಂಬುದನ್ನು ಅರಿಯಬೇಕು.

ಈ ಕಾಲದಲ್ಲಿ, ಸಮಾಜ ಭರದಿಂದ ವಿಕಾಸ ಹೊಂದುತಿರುವ ಈ ಆಧುನಿಕ ಕಾಲದಲ್ಲಿ ಮಾನವೀಯತೆ ಸಭ್ಯತೆಯ ಪುಂಜೆಯ ಈ ಕಾಲದಲ್ಲಿಯೂ ಮಾನವ ಮಾನವರ ಮೇಲೆ ದಬ್ಬಾಳಿಕೆ, ಅತ್ಯಾಚಾರ !

ಇಂದು ಸಮಾಜ ರಕ್ಷಣೆಗೆ ನಿಂತವರೇ ಈ ಕಾರ್ಯ ಮಾಡುತಿದಾರೆ. ಎಷ್ಟು ಮಠಾಧೀಶರು ಕೆಂಪು ಚಾಟಿಯ ಮರೆಯಲ್ಲಿ ವ್ಯಭಿಚಾರ ಕಣಕಿಳಿದಿಲ್ಲ? ಎಷ್ಟು ಸಮಾಜ ಮುಂದಾಳುಗಳು ಜನಸಾಮಾನ್ಯರ ರಕ್ತ ಹೀರಿ ಲಕ್ಷಾಧೀಶ ರಾಗಿಲ್ಲ? ಎಷ್ಟು ಅಧಿಕಾರಿಗಳು ಸಾಮಾನ್ಯರ ಸುಲಿಗೆ ಮಾಡಿಲ್ಲ? ಒಂದೆ ಎರಡೆ ಬೇಕಾದಷ್ಟಿವೆ ಈ ಉದಾಹರಣೆ.

ಇವರನ್ನೆಲ್ಲ ಮೆಟ್ಟಿ ಮುನ್ನಡೆಯಬೇಕಾಗಿದೆ ತಾನೂ 'ಅವನೆ' ಆಗಿದ್ದರೆ ಆ ವೃತ್ತಿ ಬಿಟ್ಟು ಬಿಡಬೇಕಾಗಿದೆ. ಆ ವೃತ್ತಿ ನಡೆಸುವವರನ್ನು ಬಯಲಿಗೆಳೆವ ಸಾಹಿತ್ಯ ನಮಗಿಂದು ಬೇಕಾಗಿದೆ

ಜ್ವಾಲೆ ಮೈ ಸೋಂಕುವ ಮೊದಲೇ ಹುಷಾರಾಗಿರುವದು ಒಳ್ಳೇಯದು

ಶ್ರೀಮಂತರ ಅತ್ಯಾಚಾರ ಮುಖಂಡರ ಅನ್ಯಾಯ ದಲಿತರ ಮೇಲೆ, ಅಸಹಾಯರ ಮೇಲೆ ಅಪ್ರತ್ಯಕ್ಷವಾಗಿ ಹೇಗೆ ಹರಿದಾಯುತಿದೆ ಎಂಬುದರ ಸಂಕೇತವೀ ಕೃತಿ ಈ ಅನ್ಯಾಯ ಅತ್ಯಾಚಾರ ನೋಡಿ ಮನ ರೋಸಬೇಕು ಕಳವಳಗೊಳಬೇಕು ಕಿಡಿಕಾರಬೇಕು ಆ ಕಿಡಿ ಜನಸಾಮಾನ್ಯರ ಏಳಿಗೆಗೆ ವಿನಾಶಕ್ಕೆ ಅಡ್ಡಗಾಲಾಗಿ ನಿಂತವರನ್ನು ತೊಡೆದು ಹಾಕಬೇಕು

ನಮ್ಮ ನಾಡಿನ ದೀನ ದಲಿತರ, ಅಸಹಾಯರ ಶಬ್ದ ಚಿತ್ರ ಈ ಕಥಾ ಸಂಗ್ರಹದಲ್ಲಿ ಮೂಡಿಸಲು ಪ್ರಯತ್ನಿಸಿದ್ದೇನೆ ಪ್ರತಿಬಿಂಬ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆಯೋ ನಾನರಿಯೆ ಆ ದೀನ ದಲಿತರಿಗಾಗಿ ನಮ್ಮ ಕರ್ತವ್ಯವಿದೆ, ನಮ್ಮ ದೈನಂದಿನ ಕೆಲಸ ಕಾರ್ಯಗಳಲ್ಲಿ ಅವರ ಸೇವೆಯೂ ಒಂದಂಶವಾಗ ಬೇಕು, ಅವರ ಪತನಕ್ಕೆ ದಾರಿದ್ರ್ಯಕ್ಕೆ ಶೋಷಣೆಗೆ ಯಾರು ಹೊಣೆ? ಎಂಬು ದನ್ನು ಅರಿತರೆ ನನ್ನ ಬರವಣಿಗೆ ಸಾರ್ಥಕವಾದಂತಾಯಿತು.

ನನಗೆ ಮೊದಲಿನಿಂದಲೂ ಪ್ರೋತ್ಸಾಹಿಸಿ, ನನ್ನ ಸಾಹಿತ್ಯ ಸೇವೆಗೆ ಜೀವಕಳೆ ತುಂಬಿದ ಸರ್ವ ಶ್ರೇಯಸ್ಸು ಹಿರಿಯ ಗೆಳೆಯ ಕೆ ಎ. ಸುಪಲಿ ಅವರಿಗೆ ಸಲ್ಲಬೇಕಾಗಿದೆ. ಅವರ ಪ್ರೋತ್ಸಾಹವಿಲ್ಲದಿದ್ದರೆ ನನ್ನ ಸಾಹಿತ್ಯ ರೂಪು ಗೊಳುತಿರಲಿಲ್ಲೇನೊ!

ಶ್ರೀ ಶಂಕರ ಮುದ್ರಣಾಲಯದ ಕೆಲಸಗಾರರು ತುಂಬ ಉತ್ಸಾಹದಿಂದ ದುಡಿದಿದಾರೆ. ಅವರ ಉತ್ಸಾಹ ಕೊಂಚ ಕಡಿಮೆಯಾಗಿದ್ದರೆ ಈ ಕೃತಿ ಇಷ್ಟು ಸುಂದರವಾಗಿ ಹೊರಬರುತಿರಲಿಲ್ಲ. ಅವರಿಗೆ ನನ್ನ ಪ್ರಥಮ ನೆನಕೆಗಳು.

ಗೋಕಾಕ<br>೨೨—೭—೫೪

ರಾಜಾರಾಮ್ ಮುಜಲೀಕರ್

ನಮ್ಮ—ಸಹೋದರರಿಬ್ಬರ—

ಭವಿಷ್ಯ ಚಿಂತಿಸುವ

**ತಾಯಿಯ ಪಾದ ಪದ್ಮಗಳಡಿಯಲ್ಲಿ**

ಅರ್ಪಿತವೀ ಚಿಕ್ಕ ಕೃತಿ.

# ವಿಷಯ ಅನುಕ್ರಮವಾಗಿ—





# ದಗ್ಧ ಜೀವ



ಬೆಳಗಿನ ಸೂರ್ಯನ ಕಿರಣಗಳ ಕಾವು ಏರುತಿರುವಂತೆ ಅವಳ ಉಸುರಿನ ಬಿಸಿಯೂ ಆವಳ ಹೃದಯದ ತಾಂಡವ ತಪ್ತ ರಸಗಂಗೆಯಂತೆ ತೇಲಿ ಅನಂತದಲ್ಲಿ ಲೀನವಾಗುತ್ತಿತ್ತು. ಹಲ ದಿನಗಳಿಂದ ನಿದ್ರೆ ಮಾಡಿರಲಿಲ್ಲ ವೇನೊ ! ಅವಳ ಕಣ್ಣು ಕೆಂಪಾಗಿ ಊದಿಕೊಂಡಿದ್ದವು ಹಾಗೆಯೇ ತಲೆಗೆ ಕೈ ಇಟ್ಟುಕೊಂಡು ಕುಳಿತಿದ್ದಳು.

ಭಾರವಾದ ಯೋಚನೆ- ಹೊರಲಾರದ ಚಿಂತೆ- ಸಹಿಸಲಾರದ ಕಳವಳ ಜೀವನವನ್ನೇ ಸುಡತೊಡಗಿದ್ದವು.

ಅವಳು ಅಸಾಹಾಯಳಾಗಿ ಕುಳಿತಿದ್ದಳು-ಪಕ್ಕ ಕಿತ್ತಿದ ಪಾರಿವಾಳದಂತೆ

ನಿಂಗ- ಅವಳ ಮಗ ಇಪ್ಪತ್ತು ದಿನದ ವಿಷಮ ಜ್ವರದಿಂದ ಬಳಲುತಿದಾನೆ ಚಡಪಡಿಸುತಿದಾನೆ ಕಿಚ್ಚಿನಲ್ಲಿ ಬಿದ್ದ ಪತಂಗದಂತೆ.

ಈ ಚಿಂತೆ ಪಾರೋತಿಯನ್ನು ಸುಡುತಲಿದೆ. ಚಡಪಡಿಸುತಿದಾಳೆ- ಹೊಟ್ಟೆಯ ಮೇಲೆ ಹೊಡೆದ ಹಾವಿನಂತೆ. ಪರಾಧೀನಳಾಗಿ-ಪಂಜರದಲ್ಲಿಯ ಹಕ್ಕಿಯಂತೆ

ಅಹುದು ಅವಳು ಪರಾಧೀನಳು-ಅವಳು ಆರ್ಥಿಕ ಪರಾಧೀನಳು.

ಆ ಹಳ್ಳಿಗೂ ! ಸರಕಾರದ 'ವೈದ್ಯ' ರೊಬ್ಬರು ವಾರಕ್ಕೊಮ್ಮೆ ಬಂದು-ಹೋಗುತ್ತಿದ್ದರು, ಅಷ್ಟೆ ಯಾವುದೊ ಬಿಳಿಪುಡಿ- ಎಲ್ಲರಿಗೂ ಅದೆ- ಕೊಟ್ಟು ಹೋಗುತ್ತಿದ್ದರು.

ಪಾರೋತಿಗೂ ಅದನ್ನೇ ಕೊಟ್ಟು ಹೋಗಿದ್ದರು. ಕಾಹಿಲೆಗೆ ಕಾರಣ ?-

—ಅನ್ನಾಭಾವ ! ಅನ್ನದ ಅಭಾವ ಅಬ್ಬಾ ! ! ಅದು ಬಹುವಂತ ಭಾರತಿಯರನ್ನು ಬಲಿತೆಗೆದುಕೊಳ್ಳುತ್ತಿರುವ ಭೀಕರ ಜಾಡ್ಯ !

ಡಾಕ್ಟರರ ಸಲಹೆ ಮಗುವಿಗೆ ಅಕ್ಕಿಯ ಗಂಜಿಯನ್ನುಳಿದು ಬೇರೆನೂ ಹಾಕಿದರೆ ಅಪಾಯ !

ಪಾರೋತಿಯ ಎದೆ ನಡುಗಿತು ಅಕ್ಕಿ ಅಕ್ಕಿ ಎಲ್ಲಿಂದ ತರಬೇಕು ಅಕ್ಕಿ ?

ಎಷ್ಟು ಯೋಚಿಸಿದರೂ ಪಾರೋತಿಯ ಸಮಸ್ಯೆ ಬಗೆ ಹರಿಯಲಿಲ್ಲ ಕಾಸಿಲ್ಲದ ದಾಸಯ್ಯ ಪ್ರಪಂಚ ಪರ್ಯಟನದ ಕನಸು ಕಂಡಂತೆ ! ಪಾರೋತಿ ಅಕ್ಕಿ ದೊರಕಿಸುವ ಯೋಚನೆಗೆ ತೊಡಗಿದಳು. ಎಷ್ಟು ಯೋಚಿಸಿದರೂ ಅವಳ ಬಗೆ ಗಣ್ಣಿನೆದುರಿಗೆ ಸುಳಿಯುವದೊಂದೇ ವ್ಯಕ್ತಿ— ಸದಾಶಿವ ಶೆಟ್ಟರು ಅವರನ್ನುಳಿದು ಅಕ್ಕಿ ತಿನ್ನುವ ಭೂಪ ಆ ಊರಲ್ಲಿ ಇನ್ನೊಬ್ಬನಿರಲಿಲ್ಲ

ಆದರೆ ಸದಾಶಿವರಾಯರಲ್ಲಿ ಅಕ್ಕಿ ಬಯಸುವದೆಂದರೆ ಹಾವಿನ ಹೆಡೆಯಲ್ಲಿಯ ರತ್ನ ಬಯಸಿದಂತೆ.

ತಾಯಿಗರುಳು ಮಗನ ದಾರುಣ ವೇದನೆಯನ್ನು ಕಂಡು ಸುಮ್ಮ ನಿದ್ದೀತೆ ? ಅಕ್ಕಿಯಿಂದ ತನ್ನ ಮಗ ಬದುಕ ಬಹುದೆಂದು ಅವಳ ಭಾವನೆ ಅದಕಾಗಿ ಸದಾಶಿವರಾಯರಲ್ಲಿ ಭಿಕ್ಷೆ ಬೇಡುವದೇನೂ ಅವಳಿಗೆ ತಪ್ಪು ಎನಿಸಿರಲಿಲ್ಲ.

ಪಾರೋತಿ ಸೆಟ್ಟರ ಮನೆ ಬಾಗಿಲಿಗೆ ಬಂದಾಗ ಅವರು 'ಪಚನ-ಪಾಚಕ' ಔಷಧಿ ಸೇವಿಸುತ್ತಿದ್ದರು

“ ಒಡೆಯ ನನ್ನ ಮಗಾ ಕಾಹಿಲೆಯಿಂದ ಚಡಪಡಿಸುತ್ತಾ ಇದಾನ್ರಿ ನಾಕ ದಿನಾ ಆತು ಒಂದು ಹನಿ ಚಾನೂ ತಗೊಳ್ಳಿಲ್ಲ ದಯ್ಮಾಡಿ ಒಂದು ಹಿಡಿ .. .. ”

ಪಾರೋತಿಯ ಕಂಠ ಬಿಗಿದು ಬಂದಿತು ಕಂಣಾ ಹನಿಗಳೆರಡು ಕೆಳಗುರುಳಿದವು ಸೆಟ್ಟರು ಅವಳನ್ನೊಮ್ಮೆ ದುರುಗುಟ್ಟಿನೋಡಿದರು

“ ಯಪ್ಪಾ ನನ್ನ ಮಗಾ ಸಾಯತಾನ್ರಿ .... ..”

“ ಸತ್ರೆ ಸುಟ್ಟಬಾ ”

ಓಹ ! ಪಾರೋತಿಯ ಎದೆಯಲ್ಲಿ ಚೂರಿ ತಿವಿದಂತಾಯಿತು. ಆದರೆ ಅಸಹಾಯತೆ ದಾರಿದ್ರ್ಯ ಬಾಯಿ ಮುಚ್ಚ ಹಚ್ಚಿದವು.

" ಒಂದು ಮುಟ್ಗಿ ಅಕ್ಕಿ ಕೊಟ್ರೆ ಪುಣ್ಯ .. .. "

" ಹಾಳಾಯಿತು ನಿನ್ನ ಪುಣ್ಯ ! ನಡೆಯಿಲ್ಲಿಂದ ಸಾಯೋನಿಗೆ ಅಕ್ಕಿ ಯಾಕೆ? "

ಸೆಟ್ಟರ ಸ್ವಭಾವವರಿತ ಪಾರೋತಿ ಕುಬಸದ ತೋಳಿನಿಂದ ಹಣ ತೆಗೆಯು ತೊಡಗಿದಳು. ಕೂಡಲೆ ಸೆಟ್ಟರ ಆ ಸಿಟ್ಟು ಮಾಯವಾಗಿ ಬಾಯಿಗೆ ನೀರು ಬಿಟ್ಟಿತು.

" ಇಷ್ಟು ದುಡ್ಡೈತಿಯಪ್ಪ, ಒಂದು ಮುಟ್ಗಿ ಅಕ್ಕಿ ಕೊಟ್ಟು ಪುಣ್ಯ ಕಟಿಕೊಳ್ರಿ. ನಾ ಸಾಯೊತನಾ ನಿಮ್ಮ ಉಪಕಾರ ಮರೆಯಾಕಿಲ್ಲ "

ಪಾರೋತಿ ಅಂಗಲಾಚಿದಳು–ಸೆಟ್ಟರ ಕಾಲ ಮೇಲೆ ಬಿದ್ದು

" ಮೂರು ರೂಪಾಯ್ಗೆ ಸೇರು "

ಎಂದರು ಸೆಟ್ಟರು ಗಂಭೀರವಾಗಿ.

" ನಾನು ಬಡಿವ್ರಿಯಪ್ಪ. ಇಷ್ಟು ದುಡ್ಡೈತೆ ನಿಮ್ಮ ಪುಣ್ಯ "

ಎಂದು ಪಾರೋತಿ ಅಂಗಲಾಚಿದಳು.

" ಎಂಟಾಣೆಗೆ ಸೇರ ಅಕ್ಕಿ ಕೊಂಡು ನಂಗೆ 'ದಿವಾಳಿ' ತೆಗೆ ಅಂತಿಯಾ?"

" ಯಪ್ಪಾ ನೀವು ಪುಣ್ಯವಂತರು. ನನ್ನ ಮಗನ್ನ ಕಾಪಾಡ್ರಿ "

ಎಂದು ಪಾರೋತಿ ಸೆಟ್ಟರ ಕಾಲಮೇಲೆ ತಲೆಯಿಟ್ಟು ಕಣ್ಣೀರು ಹರಿಸಿದಳು. ಅವಳ ಪವಿತ್ರ ಕಣ್ಣೀರಿನಿಂದ ತನ್ನ ಕಾಲು ಅಪವಿತ್ರವಾಯಿತೆಂದು ಸಟ್ಟರು ರೋಷಗೊಂಡು ಪಾರೋತಿಯನ್ನು ಹಿನ್ನೂಕಿದರು. ಅವರ ಪಾಪ-ಪ್ರಹಾರದಿಂದ ಪಾರೋತಿ ಕಟ್ಟೆಯ ಕೆಳಗೆ ಉರುಳಿದಳು. ಸೆಟ್ಟರ ಆಳು ಅವಳನ್ನು ಹೊರಗೆ ಹಾಕಿದ. ಸೆಟ್ಟರಿಂದಾದ ಅವಮಾನ ಪಾರೋತಿಗೆ ದುಃಖವನ್ನುಂಟು ಮಾಡಲಿಲ್ಲ ವ ಗು ಚಡಪಡಿಸುತ್ತಿರಬಹುದೆಂದು ಅವಳು ಮನೆಯ ಕಡೆಗೆ ಧಾವಿಸತೊಡಗಿದಳು ತಾಯಿಗರುಳು ಅಲ್ಲವೆ ಅದು ?

ಪಾರೋತಿ ಮನೆ ತಲುಪಿದಾಗ ನಿಂಗ ಕ್ಷೀಣದನಿಯಲ್ಲಿ ನರಳುತ್ತಿದ್ದ. ತಾಯಿ ಬಾಗಿಲು ದೂಡಿ ಒಳಗೆ ಬಂದಾಗ ಅವಳನ್ನೊಮ್ಮೆ ಆಸೆಗಣ್ಣಿನಿಂದ ನೋಡಿದ

ಅವ್ವಾ ನೀರು... . ”

ಮಗನ ಮುಖ ಕಾಣುತ್ತಲೇ ಪಾರೋತಿಯ ಕರುಳು ಕಣ್ಣೀರಾಗಿ ಹರಿಯಿತು ಮಗನನ್ನು ತೊಡೆಯಮೇಲೆ ಮಲಗಿಸಿಕೊಂಡಳು. ನಿಂಗ ನಿರಾಶೆಯ ಉಸಿರ್ಗರೆದ. ಮಗುವಿನ ನರಳಾಟಕ್ಕೆ ಪಾರೋತಿ ಕಂಗಾಲಾದಳು. ಅವಳ ಕಣ್ಣೆದುರು ಕಳ್ಳಸಂತೆ ಬಂದು ನಿಂತಿತು.

ಕಳ್ಳ ಸಂತೆ!

ಪಾರೋತಿ ಬೆಚ್ಚಿ ಬಿದ್ದಳು – ಕಳ್ಳ ಸಂತೆ! ಸುಳ್ಳು! ಮೋಸ! ಅಪರಾಧ! ಕಳ್ಳ ಸಂತೆ! ನಿಸರ್ಗದ ನಿಜವಾದ ಮಕ್ಕಳಿಗೆ ಕಳ್ಳ ಸಂತೆಯೊಂದು ಮಹಾಪರಾಧ! ತನ್ನ ಗಂಡ-ಭರಮ–ಸತ್ಯಕ್ಕಾಗಿಯೇ ಪ್ರಾಣ ಬಿಟ್ಟಿದ್ದ ಸದಾಶಿವ ಸೆಟ್ಟರಿಂದ ತನ್ನ ಮದುವೆಗಾಗಿ ಇನ್ನೂರು ರೂಪಾಯಿ ಸಾಲ ತಂದು ಅವು ಬಡ್ಡಿ ಸಹಿತ ಆರು ನೂರಾದಾಗ ಐದು ನೂರರಲ್ಲಿ ತನ್ನ ಹೊಲ ಕೊಟ್ಟು ಇನ್ನುಳಿದ ನೂರು ಕೊಡಲಾರದೆ ಅದೇ ಚಿಂತೆಯಲ್ಲಿ ಪ್ರಾಣ ಬಿಟ್ಟ. ಸೆಟ್ಟರಿಂದ ಹಣ ಪಡೆದಿರಲಿಲ್ಲವೆಂದು ಹೇಳಲು ಅವನಿಗೆ ಸಾಕಷ್ಟು ಆಧಾರವಿದ್ದವು ಸೆಟ್ಟರು ಭರಮನಿಂದ ಯಾವ ಕಾಗದವನ್ನೂ ಬರೆಸಿ ಕೊಂಡಿರಲಿಲ್ಲ. ಆದರೆ ಅಸತ್ಯ ಭರಮನಿಗೆ ಎಂದೂ ಸಾಧ್ಯವಾಗಿರಲಿಲ್ಲ ಆ ನೂರು ರೂಪಾಯಿ ಮುಟ್ಟಿಸುವದಕ್ಕಾಗಿಯೇ ತಾನಿನ್ನೂ ಸೆಟ್ಟರಲ್ಲಿ ದುಡಿಯುತ್ತಿರುವದು ಪಾರೋತಿಗೆ ಹೇಗೆ ಮರೆತೀತು?

“ಹ್ಹಾಂ.. !.....ಅವ್ವಾ.....ನೀ...ರು......!”

ಮಗನ ಕರೆಯಿಂದ ಪಾರೋತಿಯ ವಿಚಾರ ಪ್ರವಾಹಕ್ಕೆ ಅಡ್ಡಿ ಬಂದೊದಗಿತು. ಮಗನನ್ನು ಕೆಳಗೆ ಮಲಗಿಸಿ ಪಾರೋತಿ ನೀರು ತರಲು ಹೋದಳು ಹುಲ್ಲಿನ ಗುಡಿಸಲು ಹುಲ್ಲಿನದೇ ಒಂದು ಬಾಗಿಲು. ಗುಡಿಸಲಿಗೆ ಎರಡು ಕೋಣೆ ಒಂದರಲ್ಲಿ ಅಡಿಗೆಯ ವ್ಯವಸ್ಥೆ ಒಂದು ಒಲೆ ನಾಲ್ಕಾರು ಗಡಿಗೆ ಮಡಿಕೆಗಳು ಒಂದು ಮಣ್ಣಿನ ಬಿಂದಿಗೆ ಪಾರೋತಿ ಬಿಂದಿಗೆಯಿಂದ ನೀರು ತೆಗೆದುಕೊಂಡು ಬಂದಳು. ಬರೇ ನೀರು- ಕೇವಲ ನೀರು ಅದೇ ಅನ್ನ ಅದೇ ನೀರು. ತನ್ನ ಗಂಡ ಭರಮ– ಹೇಳಿದ ಮಾತು ಪಾರೋತಿಗೆ ಜ್ಞಾಪಕವಾಯಿತು.

‘ ನಿಂಗಣ್ಣ ಚನ್ನಾಗಿ ಸಾಕು ಪಾರಿ ! ಅವಗ ಏನೂ ಕಡಿಮಿ ಮಾಡ ಬ್ಯಾಡ. ನನ್ನಿಂದ ಅವಗ ಯಾವ ಸುಖಾನೂ ಆಗಲಿಲ್ಲ ಆ ಕೊರ್ತಿ ನೀ ತುಂಬಿ ತರಬೇಕು ಪಾರಿ ! ನಾ ಅಂತೂ ಇೀಗ ಬದುಕೂ ಹಂಗಿಲ್ಲ ನಿಂಗಣ್ಣ ಜ್ವಾಪಾನ ಮಾಡೋದ ನಿನ್ನ ಕೆಲ್ಸ. ”

ಭರಮನ ಮಾತು ಪಾರೋತಿಯ ಕಣ್ಣೆದುರಿಗೆ ಮೂಡಿ ನಿಂತವು ಮಗನ ಮುಖ ನೋಡ ತೊಡಗಿದಂತೆ ಅವಳ ಹೃದಯದ ಭಾವನೆ ತಾಂಡವ ವಾಡತೊಡಗಿದವು

“ ನೀ ಅಕ್ಕಿ ತರಾಕ ಬೇಕು ”

ನಿರ್ಧಾರದಿಂದ ಒಂದು ಮನಸ್ಸು ಹೇಳಿತು.

“ ಹ್ಯಾಂಗ ತರ್‍ಲಿ ! ಎಲ್ಲಿಂದ ತರ್‍ಲಿ ? ”

ಅಷ್ಟೇ ಅಸಹಾಯದಿಂದ ಇನ್ನೊಂದು ಮನಸ್ಸು ನುಡಿಯಿತು.

“ ಕಳ್ಳ ಸಂತ್ಯಾಗ ಸಿಗತಾವಲ್ಲ ! ”

“ ಛಿ ! ಹೊಲಸ ಕೆಲ್ಸಾ ನಾ ಮಾಡಾಕಿಲ್ಲ ”

“ ಪಾರೀ ! ಮಾಡಾಕ ಬೇಕ ಇಲ್ಲಾದ್ರ ನಿನ್ನ ಮಗಾ ಉಳಿಯೋದಿಲ್ಲ ”

“ ಹ್ಞಾಂ ! . ? ”

“ ಮಾಡ-ಮಾಡ ! ಕಳ್ಳ ಸಂತ್ಯಾಗ ಅಕ್ಕಿ ತಗೊಂಡ್ಬಾ ”

“ ಹೊಲಸ ಕೆಲ .. .... ”

“ ಥೂ ! ಇೀಗ ಯಾರ ಬಿಟ್ಟಾರ ಹೇಳು ? ಎಲ್ಲಾರೂ ಅವರ ! ಜಗತ್ತಾಗ ಖರೆ ಮಾತಾಡಾವ್ರೆಗೆಲ್ಲಾ ನಿನ್ಹಾಂಗ ನೋಡ ಸ್ತಿತಿ ! ಶೀ ಕರೇಕಾಗಿ ನಿನ್ನ ಮಗನ್ನ ಕೊಂದ್ರೆ ನಿನಗ ಯಾರ ಮಾತಾಡಸ್ತಾರೇನ ? ಇೀ ವೇದಾಂತ ಹಿಡದ ಮಗನ್ನ ಕಳಕೊಂಡೀ ಏಳು ..”

“ ... ... . . . ”

“ ಏಳು. ಇೀಗಿಂದೀಗ ಕಳ್ಳ ಸಂತ್ಯಾಗ ಅಕ್ಕಿ ತಗೊಂಬಂದ ಮಗನ್ನ ಉಳ್ಸು; ಆ ಮ್ಯಾಗ ವೇದಾಂತ ಹೇಳಂತಿ ಏಳು. ನಿನ್ನ ಮಗಾ ಬದಕ್ತಾನ....”

" ನನ್ನ ಮಗಾ ಬದಕ್ತಾನ ! "

ಒಂದೇ ಒಂದು ವಾಕ್ಯ ಪಾರೋತಿಯನ್ನು ಕುಳಿತಲ್ಲಿಂದ ಎಬ್ಬಿಸಿತು. ಮಗನಿಗೆ ಒಂದು ಗುಟುಕು ನೀರು ಹಾಕಿ ಬಾಗಿಲನ್ನೆಳೆದುಕೊಂಡು ಪಾರೋತಿ ವೇಗವಾಗಿ ಹೆಜ್ಜೆ ಹಾಕ ತೊಡಗಿದಳು.

ಗೋಕಾವಿಯ ಕಳ್ಳ ಸಂತೆಯಲ್ಲಿ ಅಕ್ಕಿ ಪಡೆದುಕೊಂಡು ಪಾರೋತಿ ಮನೆಗೆ ಮರಳುವ ಹೊತ್ತಿಗೆ ಸಂಜೆಯಾಗಿ ಎಂಟು ಗಂಟೆಯಾಗಿ ಹೋಗಿತ್ತು. ಗೋಕಾವಿಯಿಂದ ಮೆಳವಂಕಿ ಐದು ಮೈಲಿನಮೇಲೆ. ಕಗ್ಗತ್ತಲು ಮುಗಿಲನ್ನೆಲ್ಲ ಮುಸುಕಿಕೊಂಡಿತ್ತು. ಕಾರ್ಮೋಡ ಅದಕ್ಕೆ ನೆರವು ನೀಡಿತ್ತು. ಪ್ರಪಂಚವೇ 'ಶೂನ್ಯ' ದಲ್ಲಿ ಲೀನವಾಗಿತ್ತು.

ಪಾರೋತಿಯ ಮನಸಲ್ಲಿ ಮಗನ ಸುತ್ತ ಸುಳಿಯ ತೊಡಗಿತ್ತು. ತಾನು ಚಲಿಸಬೇಕಾದ ದಾರಿ ಭರದಿಂದ ಹಿಂದೋಡುತ್ತಿದ್ದಳು—ಪಾರೋತಿ. ಬೀದಿಯ ಲಾಂದ್ರದ ಕಂಬ ಮಂದವಾದ ಪ್ರಕಾಶವನ್ನು ಕೊಡುತ್ತ ಕತ್ತಲೆಯೊಡನೆ ಹೋರಾಡುತ್ತಿದ್ದವು. ಪಾರೋತಿಯ ಹೃದಯದಲ್ಲಿ ಬಿ ತಿ ಸಂಶಯದ ಮಹಾ ಬಿರಗಾಳಿಯೆದ್ದಿತು. ತಾನು ಅಪರಾಧಿ ! ಯಾರಾದರೂ ತನ್ನ ಹತ್ತಿರದ ಅಕ್ಕಿ ಕಂಡರೆ ? ಕಂಡರೆ ! ಪಾರೋತಿ ನಡುಗಿದಳು. ಬೆಚ್ಚಿದಳು.

ಪೋಲೀಸ್ ಚೌಕಿ ಬಂದಿತು. ಚೌಕಿಯಲ್ಲಿಯ ಒಂದು ಮೂಲೆಯಲ್ಲಿ ಕಟ್ಟಿಗೆಯ ಗೂಡಿನೊಳಗೆ ಪೋಲೀಸ ತನ್ನ ಮೀಸೆಗಳನ್ನು ಹುರಿಗೊಳಿಸುತ್ತ ಕುಳಿತಿದ್ದ. ಧಾಳವಾದ ಲಾಂದ್ರದ ಬೆಳಕಿನಲ್ಲಿ ಅವನ ಮುಖ ರುದ್ರವಾಗಿ ಕಾಣಿಸುತ್ತಿತ್ತು.

ಪೋಲೀಸನನ್ನು ಕಂಡ ಪಾರ್ವತಿಯ ಧೈರ್ಯ ಕರಗಿ ನೀರಾಯಿತು. ಎದೆ ವೇಗವಾಗಿ ಹೊಡೆದುಕೊಳ್ಳಲಾರಂಭಿಸಿತು. ಒಂದೊಂದಾಗಿ ಕಳ್ಳಹೆಜ್ಜೆ ಹಾಕುತ್ತ ನಡೆದಳು ಪಾರೋತಿ. ಆವಳ ಈ ಮಾನಸಿಕ ಹೋರಾಟದ ಸುಳಿವು ಪೋಲೀಸನಿಗೆ ತಿಳಿಯದಿರಲಿಲ್ಲ. ಈ ವ್ಯವಹಾರದಲ್ಲಿ ಪಳಗಿದ ಪೋಲೀಸ್—

" ಏಯ್ ಕೌನ್ ಹೈ "

ಎಂದು ಗದರಿದ. ಅವನ ಗುಡುಗಿಗೆ ಪಾರೋತಿಯ ಕರಗಿ ನೀರಾದ ಧೈರ್ಯದ ಒಡ್ಡು ಒಡೆಯಿತು. ಉಡಿಯಲ್ಲಿದ್ದ ಅಕ್ಕಿಯ ಗಂಟು ಕೆಳಗೆ ಬಿದ್ದು

ಅಕ್ಕಿ ಚೆಲ್ಲಾ ಪಿಲ್ಲಿಯಾದವು. ಪಾರೋತಿ ನಡುಗ ತೊಡಗಿದಳು. ಲಾಂದ್ರದ ಮಂದ ಬೆಳಕಿನಲ್ಲಿ ಪಾರೋತಿಯ ಸೌಂದರ್ಯ ಪೋಲೀಸನಿಗೆ ಕೆರಳಿಸಿದುದರಲ್ಲಿ ಆಶ್ಚರ್ಯವಿರಲಿಲ್ಲ.

" ಇೀ ಅಕ್ಕಿ ಎಲ್ಲಿ ತಗೊಂಡು ಹೊಂಟಿ ? "

" ನನ್ನ ಮಗಾ ಜಡ್ಡಾಗಿ ಮಲಗ್ಯಾನ್ರಿ ಸಾಬ್ರ . ! ಒಂದು ಮುಟಿಗಿ ಅಕ್ಕಿ ಗಂಜಿ ಮಾಡಿ ಹಾಕಬೇಕಂತ ತಗೊಂಡ ಹೊಂಟೆನ್ರಿ .. ಸಾಬ್ರ ....!

ಪಾರೋತಿ ದೈನ್ಯದಿಂದ ಹೇಳುತ್ತಿದ್ದಳು

" ಜಡ್ಡ ಬಿದ್ರ ? ಅಕ್ಕಿ ಯೆಲ್ಲಿಂದ ತಂದಿ ? ಆಂ ? "

ಪಾರೋತಿಗೆ ಸುಳ್ಳು ಹೇಳಿ ಅಭ್ಯಾಸವಿರಲಿಲ್ಲ. ಸತ್ಯ ಅವಳ ನಾಲಿಗೆ ಉಸುರಿತು ಹಿಡಿ ಅಕ್ಕಿಗೆ ಯಾವ ನಿರ್ಬಂಧ ಇವೆ–ಇಲ್ಲವೆಂಬುದು ಹಳ್ಳಿಯ ಮುಗ್ಧೆಯಾದ ಪಾರೋತಿಗೆ ಹೇಗೆ ಗೊತ್ತಾಗಬೇಕು ?

" ಯಪ್ಪಾ ಸಾಬ್ರ ! ಮಗಾ ನೀರ–ನೀರ ಅಂತಾ ಬಡಕೋಳಾಕ ಹತ್ಯಾನ್ರಿ ಜೀವ ತಡೀದಾತು. ನಾಕ ದಿನದಿಂದಾ ಹೊಟ್ಟ್ಯಾಗ ಏನೂ ಇಲ್ರಿ ಒಂದು ಗುಟ್ಕು ಗಂಜಿ ಮಾಡಿ ಹಾಕತೆನ್ರಿ ..ನಿಮ್ಮ ಪುಣ್ಯ ಇದೊಂದ್ಸಲಾ ಬಿಡ್ರಿ .. ನಿಮ್ಮ ಕಾಲಿಗೆ ಬೀಳ್ತೆನ್ರಿ ! "

ಪಾರೋತಿಯ ಕಣ್ಣೀರು ಪೋಲೀಸನ ಪಾದ ತೊಯಿಸಿದರೂ ಅವನ ಎದೆ ಕರಗಲಿಲ್ಲ.

" ಥೂ .. ರಂಡೆ .. ! ತಿಳ್ಯಾದಿಲ್ಲಾ ! ಮಗಾ ಸಾಯ್ತಾನಂತ ! ಕಳ್ಳ ವ್ಯಾಪಾರ್ಯಾಗ ಅಕ್ಕಿ ತಂದ ಮಾರ್ತಿರಿ ನಂಗೆಲ್ಲ ಗೊತ್ತ ನಡಿ ಪೋಲೀಸ್ ಠಾಣೇಕ "

" ಯಪ್ಪಾ ನನ್ನ ಕಾಪಾಡ್ರಿ . .ನನ್ನ ಮಗಾ....ನನ್ನ ಮಗಾ . "

ಪಾರೋತಿಯ ಕಂಠ ಬಿಗಿದು ಬಂದಿತ್ತು ಪೋಲೀಸನ ಕಾಲು ಗಟ್ಟಿಯಾಗಿ ಹಿಡಿದುಕೊಂಡು ಬೇಡತೊಡಗಿದ್ದಳು. ಅವಳ ಸ್ಪರ್ಶದಿಂದ ಪೋಲೀಸನಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅವನು ಮಾರ್ಪಟ್ಟೆ ಬೇಟೆ ಬಿಡಬಾರದೆಂದು ಮನಸ್ಸು ಎಚ್ಚರಿಸಿತು.

" ಐದು ರೂಪಾ ಯಿ ಕೊಟ್ರಿ "

ಪೋಲೀಸ್ ಸೂಕ್ಷ್ಮವಾಗಿ ಪಾರೋತಿಯನ್ನು ನೋಡಿದ ಅವನ ಕಾಮ ಕೆರಳಿತು. ಅವನು ಉನ್ಮತ್ತನಾಗಿದ್ದ.

" ನಾ ಬಡಿವ್ರಿ ಸಾಬ್ರ. ಈ ಎಂಟಾಣೆ ಗಳಸ್ಬೇಕಾದ್ರ ನಾಕ ದಿನಾ ದುಡಿಬೇಕಾತ್ರಿ ... ಇನ್ನೈದು ರೂಪ್ಯಾ ಎಲ್ಲಿಂದ ತರ್ಲಿ ದೇವ್ರೂ .... ನನ್ನ ಕಾಪಾಡ್ರಿ .. "

ಪಾರೋತಿ ಕರಳು ಕರಗುವಂತೆ ಬೇಡಿಕೊಳ್ಳುತ್ತಿದ್ದಳು

" ಹಾಗಾದರೆ , ಹಿಂಗ ಮಾಡ "

ಅವನ ಕಣ್ಣು ಮುಂದಿನ ಮಾತು ಸೂಚಿಸುತ್ತಿತ್ತು. ಏನೂ ಅರಿಯದ ಪಾರೋತಿ ಆಶಯಿಂದ ಮೇಲೆ ನೋಡಿದಳು.

" ನನ್ನ ಮಾತ ಕೇಳಿದ್ರ ನಿನ್ನ ಬಿಡತೇನಿ.... ಇಲ್ಲಾದ್ರ ... .. "

ಅಸಹ್ಯ ಮಾತು, ಅಸಹ್ಯ ನೋಟ ಅವನ ಅಂಗಾಂಗವೆಲ್ಲ ತನ್ನ ವಿಕಟ ವಾಸನೆಯನ್ನು ತೋರಿಸುತ್ತಿತ್ತು ಅವನು ಒಂದೊಂದು ಹೆಜ್ಜೆ ಮುಂದಿಟ್ಟಂತೆ ಪಾರೋತಿ ಹಿಂದೆ ಸರಿಯುತ್ತಿದ್ದಳು.

' ಸಾಬ್ರ ನನ್ನುಬಿಟ್ಬಿಡಿ . "

" ಕ್ಷಂ ! ಕ್ಷಂ !! ಕ್ಷಂ !!! ಒಂದು ತಾಸು. ಬಾ . "

ವಿಕಾರವಾದ ಮಾತು, ವಿಕಾರ ನಗೆ. ಅವನು ತಾನೆಲ್ಲಿದೇನೆಂಬುದು ಮರೆತಿದ್ದ.

ಪಾರೋತಿಯ ಕಣ್ಣು ಕತ್ತಲು ಗವಿಯಿತು. ಭರಮ ನಿಂಗ ಇಬ್ಬರ ಮುಖ ಮುಂದೆ ಬಂದು ನಿಂತವು. ಪೃಥ್ವಿ ಗರಗರ ತಿರುಗುತ್ತಿತ್ತು.

" ಅವ್ವಾ ..... ! ... ! ನೀ....ರು .. ! "

" ಪಾರೋತಿ ಜೀವ ಹ್ವಾದ್ರೂ ಕೆಡಬ್ಯಾಡ "

" ಅವ್ವಾ ಒಂದುಗುಟ್ಕು ಗಂಜೀ ಹಾಕಿ ನನ್ನ ಕಾಪಾಡು "

" ಬೇಕಾದ್ದು ಆಗ್ಲಿ ಪಾರೀ....! ಮನಿ ಹೆಸರ ಕೆಡಸ್ಬ್ಯಾಡ ನಿನ್ನ ಕುಲ ಕೆಡಬ್ಯಾಡ ! "

"ಅಪ್ಪ ... ಸೀಲು !"
"ಪಾರೀ ಕೆಡಬ್ಯಾಡ !"
"ಅ . ಪ್ಪ !"
"ಪಾರೀ !"
"ಅಪ್ಪ !"
"ಪಾರಿ !"
"ಅ ಅಪ್ಪ .. !"
"ಪಾ ರಿ.. .. ...ೀ ... ...!"

ಬರ ಬರುತ್ತ ಪಾರೋತಿಗೆ ಇಬ್ಬರ ಮುಖಗಳೂ ದೂರ-ಬಹುದೂರ ಹೋಗುತಿರುವಂತಾಯಿತು. ಅವಳು ಎಚ್ಚರ ತಪ್ಪಿದಳು. ಉನ್ಮತ್ತದಿಂದ ಪಶುತ್ವಕ್ಕೇರಿದ ಪೋಲೀಸ್ ಅವಳನ್ನು ಹೊತ್ತುಕೊಂಡು ಬದಿಯಲ್ಲಿಯ ಹಾಳು ಗುಡಿಯನ್ನು ಹೊಕ್ಕ

ಪಾರೋತಿಗೆ ಮೂರ್ಛೆ ತಿಳಿದಾಗ ಪೋಲೀಸ್ ಅವಳ ಮೇಲೆ ಬಲವಾದ ಆಕ್ರಮಣ ನಡೆಸಿದ್ದ.

ಪೋಲೀಸನ ಬಾಹುಪಾಶದಿಂದ ಬಿಡಿಸಿಕೊಂಡ ಪಾರೋತಿ ನೆಲದ ಮೇಲಿನ ಅಕ್ಶಿಯನ್ನು ಬಳಿದುಕೊಂಡಳು ಪೋಲೀಸ್ ಅವಳನ್ನು ತಿರಸ್ಕಾರ ತುಂಬಿದ ಮುಗುಳು ನಗೆಯಿಂದ ನೋಡುತಿದ್ದ ಉಂಡು ಬಿಸುಟಿದ ಎಲೆಯಂತೆ ಪಾರೋತಿಗೆ ಚೂರಿ ತಿವಿದಂತಾಯಿತು

ಪಾರೋತಿ ಊರದಾರಿ ಹಿಡಿದಾಗ ಹನ್ನೆರಡು ಗಂಟೆ ಬಾರಿಸಿತು.

ಅಂಧಃಕಾರ- ಎಲ್ಲೆಲ್ಲೂ-ಗಾಡಾಂಧಃಕಾರ. ಸುತ್ತಲೆಲ್ಲ ಶಾಂತಿ ತನ್ನ ರಾಜ್ಯ ಆಳುತ್ತಿತ್ತು ಮೌನವಾಗಿ 'ಕ್ರಿ ಕ್ರಿ ಕ್ರಿ' ಎಂದು ಹುಳುಗಳು ಅದರ ಸಾರ್ವಭೌಮತ್ವವನ್ನು ಹಾಡಿ ಹೊಗಳುತ್ತಿದ್ದವು

ಎಲ್ಲ ಕಡೆಗೂ ಶಾಂತಿ !

ಪಾರೋತಿಯ ಪುಟ್ಟ ಹೃದಯದಲ್ಲಿ ಮಾತ್ರ ಅಶಾಂತಿಯ ಮಹಾ ಅಲೆಗಳು ಪ್ರಚಂಡ ತಾಂಡವ ಮಾಡುತ್ತಿದ್ದವು. ಅಂಥ ಭೀಕರ ಕಾರ್ಗತ್ತಲೆಯಲ್ಲಿ ಅವಳು ಎಡವುತ್ತ ಏಳುತ್ತ ವೇಗವಾಗಿ ಹೆಜ್ಜೆ ಹಾಕ ತೊಡಗಿದ್ದಳು.

ಗುಡಿಸಲಿನವರು ಬಂದಾಗ ಇಕ್ಕಿದ ಬಾಗಿಲು ಹಾಗೆಯೇ ಇತ್ತು ಪಾರೋತಿ ನಡುಗಿದಳು. ಓಹ! ತನ್ನ ಮಗು ನೀರಡಿಕೆಯಿಂದ ಬಳಲುತಿರಬಹುದು ಒಂದು ಹನಿ ನೀರು ಹಾಕುವವರು ಯಾರೂ ಇರಬೇಡವೇ! ಪಾರೋತಿ ಬಾಗಿಲು ದೂಡಿದಳು ಹೊರಗಿನದಕಿಂತಲೂ ಒಳಗೆ ಕತ್ತಲು ಭೀಕರವಾಗಿತ್ತು ಶಿವನೆ! ಪಾರೋತಿ ಕಡ್ಡಿ ಕೆರೆದಳು ಹಣತೆ ಉರುಸಿದಳು ಆ ಮಂದ ಪ್ರಕಾಶದಲ್ಲಿ ಸಿಂಗನ ಆಕೃತಿ ಅಸ್ಪಷ್ಟವಾಗಿ ಕಾಣಿಸಿತು ಮಗನ ಮುಖದ ಮೇಲಿನ ಹೊದಿಕೆಯನ್ನು ಓರೆ ಮಾಡಿ ನೋಡಿದಳು. ಅದೇ ನಿದ್ರೆ ಬರುವಂತಿತ್ತು ಎಷ್ಟು ಸಂತೋಷ ಅವಳಿಗೆ! ನನ್ನ ಮಗ ಬದುಕಿದ!

ಪಾರೋತಿ ಬೇಗ ಬೇಗ ಗಂಜಿ ಸಿದ್ಧ ಮಾಡಿದಳು

“ಮಗೂ ... ಸಿಂಗಾ ”

ಸಿಂಗನನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುತ್ತ ಹೇಳಿದಳು

“ಅ ... ಮ್ಮಾ .. . !”

ಸಿಂಗ ತುಟಿಯಲ್ಲಿಯೇ ಮಾತನಾಡಿದ ಅವನ ಕಣ್ಣು ತಾಯಿಯನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದವು

“ ..ಅ .. ಮ್ಮಾ ಅ .. ಮ್ಮಾ... !”

ಸಿಂಗನ ತುಟಿ ಅಲುಗಾಡುತ್ತಿದ್ದವು. ಚಿಕ್ಕ ಸವುಟಿನಿಂದ ಪಾರೋತಿ ಮಗನಿಗೆ ಗಂಜಿ ಹಾಕಿದಳು ಗಂಜಿ ಸಿಂಗನ ಗಂಟಲಲ್ಲಿಳಿಯಲಿಲ್ಲ

ಅವನ ಕಣ್ಣು ತಾಯಿಯನ್ನೇ ನೋಡುತ್ತಿದ್ದವು ಎರಡು ಕಣ್ಣು ಎರಡು ಹನಿ ಉದುರಿಸಿದವು ಪಾರೋತಿಯ ದುಃಖ ಉಮ್ಮಳಿಸಿ ಬಂತು

ಸಿಂಗ ತೆರೆದ ಕಣ್ಣಿನಿಂದ ತಾಯಿಯನ್ನೇ ನೋಡುತ್ತಿದ್ದ. ಆದರೆ ಆ ಕಣ್ಣಿನಲ್ಲಿ ಚೇತನವಿರಲಿಲ್ಲ

ಅದೇ ಹೊತ್ತಿನಲ್ಲಿ ಎದುರಿನ ಅರಳೀ ಮರದಮೇಲೆ ಕುಳಿತ ಗೂಗೆಯೊಂದು ವಿಕಾರವಾಗಿ ಕೂಗಿತು.

ಮಗನ ವಿಲಾಪ ಮಾಡುವ ಪಾರೋತಿಯ ಆಕ್ರೋಶ ಶಾಂತತೆಯನ್ನು ಭೇದಿಸಿಕೊಂಡು ಬರುತಿತ್ತು.

# ದೀವಳಿಗೆ



" ಅವ್ವಾ . ! ನಂಗೂ ಹೊಸಾ ಅಂಗಿ.... ರಾಮೂ ಶಂಕರು ಎಲ್ಲಾರೂ ತೊಟ್ಟಾರ. ನಂಗೂ ಊಂ ಊಂ ಹೂಂ ...."

ಏಳು ವರುಷದ ಮಗು ಕರಿಯ ತನ್ನ ತಾಯಿಯನ್ನು ಪೀಡಿಸುತ್ತಿದ್ದ.

" ನಾಳೆ ಕೊಡಸ್ತೀನಿ ಅಂ ? ನಾಳೆ ಸಾವ್ಕಾರ್ರು ಪಗಾರ ಕೊಟ್ರ, ಕೊಂಡಿಸಿ ಕೊಡ್ತೀನಿ ಅಳ್ಬ್ಯಾಡ್ದಪ್ಪಾ ಮಗೂ . "

ನೀಲವ್ವ ಮಗನನ್ನು ಸಂತೋಷ ಸಮಾಧಾನ ಪಡಿಸಲು ಯತ್ನಿಸುತ್ತಿದ್ದಳು ಎಷ್ಟು ಹೇಳಿದರೂ ಕರಿಯನಿಗೆ ಸಮಾಧಾನವಿಲ್ಲ ನೆರೆ ಮನೆಯ ಹುಡುಗರು ಹೊಸ ಬಟ್ಟೆ ತೊಟ್ಟುದನ್ನು ಕಂಡು ತನಗೂ ಬೇಕೆಂದು ಹಟ ಮಾಡುತಿದ್ದ ಜತೆ ಹುಡುಗರಂತೆ ತಾನೂ ಸಿಂಗಾರಾಗಬೇಕೆಂದು ಕರಿಯನ ಸಹಜ ಬಯಕೆ

" ನಂಗೆ ಇಂದ ಬೇಕವ್ವ ರಾಮೂ ಶಂಕರೂ ಎಲ್ಲಾರೂ ತೊಟ್ಟಾರ ನಂಗೂ "

" ನಾಳೆ ಕೊಡಸ್ತೀನಿ ಹಂಗ ಹಟಾ ಮಾಡಬ್ಯಾಡ್ದ "

ಕರಿಯನ ಹಟ ಧೃಢವಾಗುತ್ತಲೇ ಇತ್ತು ನೀಲವ್ವ ಮಗನ ತಲೆಯ ಮೇಲೆ ಕೈಯಾಡಿಸುತ್ತ ಹೇಳುತ್ತಿದ್ದಳು ' ನಾಳೆಯಾದರೂ ಎಲ್ಲಿಂದ ತರೋದು ? ತನ್ನ ಹಂತೇಲಿ ಅಷ್ಟು ದುಡ್ಡು ಐತಾ ? " ಎಂದು ವಾಸ್ತವತೆ ಅವಳ ಮನಸ್ಸು ಅರಿವು ಮಾಡಿ ಕೊಡುತ್ತಿತ್ತು ಮಗುವಿನ ಆ ಯಾಚನೆಗೆ ಅವಳ ಕರುಳು ಕಣ್ಣೀರಾಗ ವದು ಆದರೆ ಮಾಡುವದೇನು ? ಕರಿಯನ ಹಟ ಜೋರಾಗುತ್ತಲೇ ಇತ್ತು ಅದನ್ನು ತಾಳಿಕೊಳ್ಳುವಷ್ಟು ತಾಳ್ಮೆ ಜಗತ್ತಿನ ಕ್ರೂರತೆಯನ್ನೇ ತಾಳಿಕೊಂಡ ನೀಲವ್ವನಲ್ಲಿರಲಿಲ್ಲ. ಅವಳಿಗರಿಯದೇ ಅವಳ

ಕೈಗಳು ಕರಿಯನ ಕೆನ್ನೆಗೆ ನಾಲ್ಕೇಟು ಕೊಟ್ಟವು. ಮಗು ಮೆತ್ತಗಾಯಿತು.

"ನಾಳೆ ಕೊಡಿಸ್ತೀಯಾ ಅವ್ವ?"

ಎಂದು ಆಶೆ ತುಂಬಿದ ಕಣ್ಣಿನಿಂದ ಕೇಳಿತು.

"ಹೂಂ!"

ನೀಲವ್ವನಿಗರಿಯದೇ ಅವಳ ಮುಖದಿಂದ ದನಿಯೊಂದು ಹೊರಟು ಕರಿಯನಿಗೆ ಆಶೆ ತೋರಿಸಿತು. ಅವನು ತನ್ನ ಆಸೆಯ ಗೋಪುರವನ್ನು ಕಟ್ಟುತ್ತ ಹೊರಟು ಹೋದ.

ನೀಲವ್ವ ಸ್ತಂಭಿತಳಾಗಿ ಗುಡಿಸಲಿನ ಗೋಡೆಗಾತು ಕುಳಿತಿದ್ದಳು.

ನೀಲವ್ವ ಕಡು ಬಡವಿ. ಸತ್ಯಪ್ಪ ಅಕಾಲ ಮೃತ್ಯುವಿಗೀಡಾಗಿ ಎರಡು ವರುಷ ಸಂದಿದ್ದವು. ಸತ್ಯಪ್ಪನೊಡನೆ ನಾಲ್ಕು ವರುಷ ಸುಖವಾಗಿ ಬಾಳುವೆ ಮಾಡಿದ ನೀಲವ್ವನಿಗೆ ತನ್ನ ಜೀವನದ ವಸಂತಕಾಲ ಅದಷ್ಟೇ ಎಂದು ಮೆಲುಕು ಹಾಕುತ್ತ ಕುಳಿತುಕೊಳ್ಳ ಬೇಕಾಗಿತ್ತು. ಮುಂದೆ ಉಳಿದದ್ದು ಅವಳ ಪಾಲಿಗೆ ಅಪಾರ ಸಹರಾ ಮರುಭೂಮಿಯನ್ನು ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ದಾಟ ಬೇಕಾದ ದುಃಖ. ನೀಲವ್ವ ತನ್ನ ಮಗನೊಂದಿಗೆ ಅದನ್ನೂ ದಾಟುತ್ತಿದ್ದಾಳೆ.

ಸತ್ಯಪ್ಪ ಗಿರಣಿ ಮುಷ್ಕರದಲ್ಲಿ ತೀರಿ ಹೋದ ಮೇಲೆ ನೀಲವ್ವ ಗಂಡನ ಕೆಲಸಕ್ಕೆ ಪ್ರಯತ್ನಿಸಿದಳು. ದುರ್ಭಾಗ್ಯ! ಪ್ರಯತ್ನ ಫಲಿಸಲಿಲ್ಲ. ಊರಿನಲ್ಲಿಯ ನಾಲ್ಕಾರು ಮನೆಗಳ ಮುಸುರೆ ತಿಕ್ಕಿ ಜೀವನ ಸಾಗಿಸುತ್ತಿದ್ದಾಳೆ. ಇದ್ದ ದಿನ ಊಟ. ಇಲ್ಲದ ದಿನ ತಾಯಿ ಮಗುವಿಗೆ ಹಳ್ಳದ ನೀರೇ ಆಹಾರ!

ನೀಲವ್ವನ ಗುಡಿಸಲ ಎದುರಿಗೆ ಮುಗಿಲನ್ನೇ ಮುಟ್ಟಲು ತಲೆಯೆತ್ತಿ ನಿಂತ ಭವ್ಯ ಕಟ್ಟಡದ ಸುಂದರ ಗೋಪುರಗಳು. ಅಂದು ದೀಪಾವಳಿ. ಮನೆಯನ್ನೆಲ್ಲ ವಿದ್ಯುದ್ದೀಪಗಳಿಂದ ಅಲಂಕರಿಸಿದ್ದಾರೆ. ಕೆಂಪು ಹಸಿರು ನೀಲಿ ಬಿಳಿ-ಬಗೆ ಬಗೆಯ ಬಣ್ಣದ ದೀಪಗಳು. ಬಾಗಿಲಿಗೆ ಸುಂದರ ತೋರಣಗಳು. ಗೋಡೆಗಳಿಗೆ ಸುಂದರ ಬಣ್ಣಗಳು. ಎದುರಿಗೆ ಕೈದೋಟ. ಬಗೆಬಗೆಯ ಹೂವಿನ ಗಿಡಗಳು. ವೆರಾಂಡಿನಲ್ಲಿ ಮಕ್ಕಳು ಚಿನ್ನಾಟವಾಡುತ್ತಿವೆ. ಹೊಸ ಹೊಸ ಬಟ್ಟೆ. ಹೂಬಾಣ ಪಟಾಕ್ಷಿ ಮದ್ದು. ಹುಡುಗರ ನಲಿದಾಟ-ಆನಂದ ಹೇಳ ತೀರದು. ಕೆಲವು ಹುಡುಗರು ಕೈಯಲ್ಲಿ ಉಂಡಿ ಚಕ್ಕುಲಿ ಜಿಲೇಬಿ ಹಿಡಿದು

ತಿನ್ನುತಿವೆ ತುಂಬಾ ಸೊಗಸು ಅವರದು–ಅದು ದೀಪಾವಳಿ !

ಕರಿಯ ಕಂಪೌಂಡಿನ ಗೋಡೆಗಾತು ಇದನ್ನೆಲ್ಲ ನೋಡುತಿದಾನೆ. ಅವನಿಗೂ ಆಸೆ—ತಾನೂ ಅವರಂತೆ ಆಗಬೇಕೆಂದು. ಅವನ ಬಾಯಲ್ಲಿಯೂ ನೀರು ಬಿಡುತಿದೆ ಆ ತಿಂಡಿಯನ್ನು ಕಂಡು ಆದರೆ– ಆದರೆ ? ಮರುಕ್ಷಣ ತಾಯಿಯ ಹೊಡೆತ ನೆನಪಿಗೆ ಬರುತಿದೆ. ಮನೆಗೆ ಮರಳಲು ಮನಸ್ಸು ಬಾರದೆ ಅವರನ್ನೇ ನೋಡುತ್ತ ನಿಲ್ಲುತ್ತಾನೆ. ಒಂದು ಚೂರು ತನಗೂ ಕೊಡಬಹುದೆಂದು ಆಸೆಗಣ್ಣಿನಿಂದ ನೋಡುತ್ತ ನಿಲ್ಲುತ್ತಾನೆ ಅವರನ್ನು ಮಾತನಾಡಿಸಲು ಹವಣಿಸುತಾನೆ ಕರಿಯ ಒಂದು ಹೆಜ್ಜೆ ಮುಂದೆ ಇಡುತ್ತಲೆ ತಮ್ಮ ನಾಯಿಯನ್ನು ಅವನ ಮೇಲೆ ಬಿಡುತ್ತವೆ ಕರಿಯ ಹೆದರಿ ತನ್ನ ಮನೆಯ ಬಾಗಿಲಿಗೆ ಓಡುತ್ತಾನೆ ಹುಡುಗರು ನಗುತ್ತವೆ. ವಿಜಯದಿಂದ ಮರಳಿದ ನಾಯಿಗೆ ತಿಂಡಿಯನ್ನು ಚೆಲ್ಲುತ್ತವೆ

ಹುಡುಗರಿಗೆ ಇದು ಒಂದು ಆಟ–ಚೆಲ್ಲಾಟ

ತನ್ನ ಮನೆ ಬಾಗಿಲಿನಲ್ಲಿ ಕುಳಿತು ಇದನ್ನೆಲ್ಲ ನೋಡುತಿದ್ದ ನೀಲವ್ವನ ಅಂತರಂಗಕ್ಕೆ ಬರೆ ಕೊಟ್ಟಂತಾಗುತ್ತದೆ ತನ್ನ ದಾರಿದ್ರ್ಯ–ಬಡತನಗಳನ್ನು ನೆನೆದು ದುಃಖ ಉಕ್ಕಿ ಬರುತ್ತದೆ ಇಂದು ಕರಿಯ ದೊಡ್ಡ ಮಗುವಾಗಿದಾನೆ ಅವನಿಗೆ ತಿಳುವಳಿಕೆ ಮೂಡಿದೆ–ತಾನೂ ಜತೆಯವರಂತೆ ಇರಬೇಕೆಂದು ನೀಲವ್ವನಿಗಿದು ಪ್ರಥಮ ಅನುಭವ ಕಡು ಬಡತನದು.

ಅದೂ ದೀವಳಿಗೆಯ ಸುದಿನದಲ್ಲಿ

ದೀವಳಿಗೆ !

ನಾಡಿಗೆಲ್ಲ ಸುಖಕರವಾಗಿ ಉತ್ಸಾಹ ಉಲ್ಲಾಸ ಕರವಾಗಿ ಬಂದರೆ ತನಗೆ ಕಡು ಬಡತನದ ಅನುಭವವನುಣಿಸಲು ಬಂದಿದೆ. ಮಗುವಿನ ಮನಸ್ಸಿನಲ್ಲಿಯ ಒಂದು ಚಿಕ್ಕ ಆಸೆಯನ್ನು ಪೂರೈಸಲು ತನಗೆ ತ್ರಾಣವಿಲ್ಲವಲ್ಲ !

ನನ್ನ ಬಾಳೊಂದು ಬಾಳೆ ?

ನನ್ನಂತೆ ಇನ್ನೂ ಎಷ್ಟು ಜನ ದರಿದ್ರರಿದ್ದಾರೆ ಈ ನಾಡಿನಲ್ಲಿ ?

ನೀಲವ್ವ ನಿಟ್ಟುಸಿರೊಂದು ಹೊರದೂಡಿ ಕಂಡಂಚಿನಲ್ಲಿ ಬಂದ ಹನಿಯನ್ನು ಸೆರಗಿನಿಂದ ಒರಸಿಕೊಂಡು ಕೋಳನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ನೆಲಕ್ಕೆ ಒರಗಿದಳು

ಏನಿದೆ ಈ ಮನೆಯಲ್ಲಿ ?

ತೊಳೆದ ಮನೆ !

ಮಗುವಿನ ಆಸೆ ಪೂರೈಸಲಾದೀತೆ ?

ಉಫ್ !

ಇದೇ ವಿಚಾರದಲ್ಲಿ ನೀಲವ್ವ ನಿದ್ರೆ ಹೋದಳು ಕರಿಯನೂ ಅವಳ ಮಗುಲಲ್ಲಿ ನಿದ್ರೆ ಹೋಗಿದ್ದ.

ನಸು ಬೆಳಕಾಗುತ ಬಂದಿದೆ ಮೂಡಣ ದಿಕ್ಕು ಕೆಂಪು ಬಣ್ಣದ ಓಕಳಿ ಯಾಡಿ ಸೂರ್ಯನಿಗೆ ಸ್ವಾಗತದ ಸಿದ್ಧತೆ ನಡೆಸಿದೆ ತಂಪಾದ ತಿಳಿಗಾಳಿ ತೀಡಿ ತೀಡಿ ಸುಳಿದಾಡುತಿವೆ ದೂರಿನಿಂದ ಮಂಗಲ ವಾದ್ಯಗಳು ಗಾಳಿಯಲ್ಲಿ ತೇಲಿ ಬರುತಿವೆ. ಎದುರಿನ ಭವ್ಯ ಕಟ್ಟಡವಿನ್ನೂ ವಿದ್ಯುದ್ದೀಪಗಳಿಂದ ಬೆಳಗತೊಡಗಿದೆ

ಎಲ್ಲ ಕಡೆಗೂ ಆನಂದ, ಉತ್ಸಾಹ, ಉಲ್ಲಾಸ, ನಗೆ, ಸಂತೋಷ, ಹಿಗ್ಗು ಆದರೆ ಒಂದೇ ಒಂದು ಜೀವಿ ಜತೆಗೆ ಒಂದು ಮಗು, ಯಾವ ಸುಖ-ಸಮಾಧಾನಗಳಿಲ್ಲದೆ ಕೇವಲ ನಿಟ್ಟುಸಿರಿನೊಡನೆ ಕಣ್ಣೀರು ಮಿಡಿಯುತಿವೆ-ಎರಡು ಜೀವಿ.

ನೀಲವ್ವ ಮಗನಿಗೆ ಸಮಾಧಾನ ಹೇಳುವದರಲ್ಲಿ ಸೋತಿದ್ದಳು

“ ಅವ್ವ ನಂಗ ಅಂಗಿ ಬ್ಯಾಡ ಉಂಡಿ ಬೇಕು ”

ಎದುರಿನ ಹುಡುಗರು ಉಂಡಿ ಚಕ್ಕುಲಿ ತಿನ್ನುತಿರುವದನ್ನು ಕಂಡು ಕರಿಯ ಹಟ ಹಿಡಿದ. ಹಟ, ಹಟದ ಮೇಲೆ ಹಟ-ಹೊಸ ಹಟ !

ನೀಲವ್ವ ಕಂಗಾಲಾಗಿದ್ದಳು ! ಅವಳಿಂದ ತಡೆಯಲಾಗಲಿಲ್ಲ ಎದುರಿನ ಮನೆಯಲ್ಲಿಯೇ ಅವಳು ಮುಸುರೆ ತಿಕ್ಕುತ್ತಿದ್ದುದು ಒಂದು ಉಂಡಿಯನ್ನಾದರೂ ಬೇಡಿ ತರಬೇಕೆಂದು ಹಿತ್ತಲು ಬಾಗಿಲಿಗೆ ಹೋದಳು.

" ಅ ಮ್ಮಾ ... ... "

" ಯಾರು ? "

ಒಳಗಿನಿಂದ ಸ್ತ್ರೀ ದನಿಯೊಂದು ತೂರಿ ಬಂತು.

' ನಾನು ಅಮ್ಮ .. .. ನೀಲಿ "

" ಯಾಕೆ ಬಂದೆ ? "

" ಅಮ್ಮಾ ಮಗೂ ಅಳ್ತಾಯಿತ್ತು "

" ಇಷ್ಟು ಬೇಗ ಪಾತ್ರೆ ಬೇಳ್ತಾವೆ ? "

" ಅದಕ್ಕಲ್ಲಮ್ಮ . ! "

" ಮತ್ತೆ ? "

ಸ್ತ್ರೀ ಬಾಗಿಲಿಗೆ ಬಂದು ಕೇಳಿದಳು. ಅವಳ ಕೈ, ಕುತ್ತಿಗೆ ಚಿನ್ನದಾಭರಣ ದಲ್ಲಿ ಮಡಗಿ ಹೋಗಿತ್ತು ಭರ್ಜರಿ ಶಾಲು !

" ಮಗು ಅಳ್ತಾಐತೆವ್ಮಾ ಒಂದು ಚೂರು ತಿಂಡಿ ಕೊಟ್ಟೆರಿಂತ ಬಂದೆ "

ನೀಲವ್ವ ತನ್ನ ಜೀವನದಲ್ಲಿಯೇ ಯಾಚಿಸಿದ್ದು ಅದೇ ಮೊದಲು

" ಐ ! ಇನ್ನೂ ಬೆಳಗಾಗಿಲ್ಲ ಶುರೂ ಆತವ್ಟಾ ಈ ಬೇಡಾವ್ರದು. ನನ್ಮಕ್ಕಳ್ಗೆ ಕೂಡಾ ಇನ್ನೂ ಕೊಟ್ಟಿಲ್ಲ. ಇಕೀ ಮಗಾ ಅಳ್ತಾನಂತ ಅತ್ರ ಯೇನು ಮುತ್ತು ಉದರ್ತಾವೇನು ಹೋಗು ದೊಡ್ಡ ಸರ್ದಾರ ಮಗಾ ಆಗ್ಯಾನ"

ಎಂದು ಸಿಟ್ಟಿನ ಮಳೆಗರೆದು ಒಡತಿ ಒಳಗೆ ಹೋದಳು

ನೀಲವ್ವ ! ಸಮಾಜವೇ ತಿರಸ್ಕರಿಸಿದ ಪಾಪವನ್ನೇ ಅರಿಯದ ಪಾಪಜೀವಿ ಹೊರಲಾರದ ದುಃಖ ಅವಮಾನದ ಮೂಟೆಯನ್ನು ಹೊತ್ತು ಹಿಂತುರಿಗಿದಳು.

" ಅವ್ಮಾ .. .... ಉಂಡಿ ತಂದಿ ? "

ಕರಿಯನ ಆ ಆಶೆಯಿಂದ ತುಂಬಿದ ಪ್ರಶ್ನೆ ನೀಲವ್ವನ ಕಣ್ಣೀರ ಕಟ್ಟೆಯನ್ನು ಒಡೆಸಿತು. ತಾಳಲಾರದ ದುಃಖ, ಅವಮಾನ! ಅವಳು ಕುಸಿದಳು. ಹೃದಯದಲ್ಲಿದ್ದ ದುಃಖದ ಮಹಾಜ್ವಾಲೆ ಕಣ್ಣಿಗೂ ತನ್ನ ನಾಲಗೆ ಚಾಚಿತು.

ನೀಲವ್ವ ಮಗನನ್ನು ಬಿಗಿಯಾಗಿ ಅಪ್ಪಿಕೊಂಡು ದುಃಖಿಸಿದಳು. ನಾಲ್ಕು ನೇತ್ರಗಳ ಬಿಸಿನೀರು ಕಾಲುವೆಯಾಗಿ ಹರಿಯಿತು

ಅದೇ ಅವರಿಗೆ ದೀವಳಿಗೆಯಾಯಿತು.

ದೀವಳಿಗೆ !

“ ...ದಿ ..ೀ ...ವ .. ಳಿ ..ಗೆ ! ...! ”

---

# ಹಸಿವು



" ಬೆಳಗಾಂವಿ ಕೇಂದ್ರ

ಬಿ ಎ ಮೊದಲನೆಯ ವರ್ಗ

೨೩೮ ಕೆ ವಿಜಯ ಕುಮಾರ "

ಇಡಿಯ ವೃತ್ತ ಪತ್ರಿಕೆ ತುಂಬ ವಿಜಯನಿಗೆ ಇವಿಷ್ಟೇ ಅಕ್ಷರಗಳು ಎದ್ದು ಕಾಣಿಸುತ್ತಿದ್ದವು ಎಷ್ಟೋ ದಿನಗಳಿಂದ ಕಟ್ಟುತ ಬಂದ ಕನಸು ಇನ್ನು ಕೆಲವೇ ದಿನಗಳಲ್ಲಿ ನನಸಾಗಲಿದೆ. ಅದರ ಶುಭ ದ್ಯೋತಕದ ಚಿನ್ಹೆ ಇಂದು ಕಾಣಿಸಿ ಕೊಂಡಿದೆ ತನ್ನ ಕಡು ಬಡತನದಲ್ಲಿ ಸಹಸ್ರ ಶ್ರಮಪಟ್ಟು ವಿದ್ಯೆ ಸಾಗಿಸಿದ್ದು ಇಂದು ಸಾರ್ಥಕವಾಯಿತು.

ಬಿ ಎ ಪರೀಕ್ಷೆಯ ಪರಿಣಾಮ, ಅದೂ ಮೊದಲನೆಯ ವರ್ಗ ಎಷ್ಟು ಆನಂದ! ಒಹ! ಈ ಆನಂದದ ಹಾಲು ಗಡಲಿನಲ್ಲಿಯೂ ನಿಟ್ಟುಸಿರಿನ ತೆರೆಯೊಂದೇಳದಿರಲಿಲ್ಲ

ವಿಜಯ ಹುಟ್ಟಿದ್ದು ಒಂದು ಬಡ ಕುಟುಂಬದಲ್ಲಿ ಪದವಿ ಪರೀಕ್ಷೆಯ ವರೆಗೆ ಅವನಿಗೆ ಓದುವದು ಸಾಧ್ಯವಿರಲಿಲ್ಲವಾದರೂ ತಾಯಿಯ ಪರಿಶ್ರಮದಿಂದ ಸಾಧ್ಯವಾಗಿತ್ತು ತಂದೆ ಗಳಿಸಿದ ಚೂರು ಆಸ್ತಿ—ನಾಲ್ಕು ಎಕರೆ ಭೂಮಿ! ಅದನ್ನೇ ಮಾರಿ ತಾಯಿ ಮಗನ ಶಿಕ್ಷಣ ಮುಂದುವರೆಸಿದಳು ತಾನು ಒಂದು ಹೊತ್ತು ಇದ್ದರೆ ಅನ್ನ ಇಲ್ಲವಾದರೆ ಮಜ್ಜಿಗೆ ಹಿಟ್ಟು! ತನ್ನ ಜೀವನದ ತ್ಯಾಗ-ಬಲಿದಾನದಿಂದ ಮಗನ ಭವಿಷ್ಯ ಜೀವನಕ್ಕೆ ಭದ್ರ ಅಡಿಗಲ್ಲನ್ನಿಟ್ಟಳು ಅದು ತಾಯಿಯ ತ್ಯಾಗ-ಕರ್ತವ್ಯ! ಕಡೆಗೆ ಆ ತ್ಯಾಗದಲ್ಲಿಯೇ ಜೀವ ನೀಗಿದಳು

ತನ್ನ ಯಶಸ್ಸನ್ನು ಕಾಣಲು ತಾಯಿ ಇಲ್ಲ! ಇಂದು ಅವಳು ಇದ್ದಿದ್ದರೆ? ಹ್ಞಂ! ತನ್ನ ದುರ್ಭಾಗ್ಯ! ಆದರೆ ಅವಳ ಆತ್ಮಕ್ಕೆ ಶಾಂತಿ ದೊರೆವಂತೆ

ಮಾಡುವದು ತನ್ನ ಕರ್ತವ್ಯ !

ವಿಜಯ ನಿಟ್ಟುಸಿರ್ಗರೆದ.

ಕೈಯಲ್ಲಿಯ ವೃತ್ತ ಪತ್ರ ಜಾಗೆಯಲ್ಲೇ ಇತ್ತು.

ಅಂತೂ ಬಿ ಎ ಪಾಸಾಗಿದ್ದಾಯಿತು.

ಮುಂದೆ ?

ಕೇವಲ ಪದವಿ ಪತ್ರದಿಂದ ತಾನು ಬದುಕ ಬಹುದೆ ?

ಇಲ್ಲ ಬದುಕಿಗೆ ಅದೊಂದು ಆಧಾರ

ವಿಜಯನ ಉತ್ಸಾಹ ಕ್ರಮ ಕ್ರಮವಾಗಿ ಕುಂದತೊಡಗಿತು. ಮುಂದೆ ವಿದ್ಯೆ ಸಾಗಿಸುವದಂತೂ ಸಾಧ್ಯವಿರಲಿಲ್ಲ ತಿಂಗಳಿಗೆ ಸಾಲುವಷ್ಟು ಹಣ ಕೈಯಲ್ಲುಳಿದಿದೆ ಅಷ್ಟರಲ್ಲಿ ಕೆಲಸ ದೊರಕಿಸಲೇ ಬೇಕು ಇಲ್ಲವಾದರೆ.... !

ವಿಜಯನ ದೃಷ್ಟಿ ಕೆಳಗೆ ಜಾರಿತು

" Wanted

Young man who have Passed B A. or B Sc. and who can Conduct History, Geography and Science to the lower classes Applications are commenced, pay according to G P. Scale

*Chairman Municipality*

*Date* "

ವಿಜಯನಿಗೆ ಒಂದು ಮಾಣಿಕ ದೊರೆತಂತಾಯಿತು. "Good" ಎಂದು ಕೂಗಿ ಬಿಟ್ಟ, ಎದ್ದವನೆ ಅರ್ಜಿಯ ಟೈಪು ಮಾಡಿ ಜತೆಗೆ ಸಾಲುವಷ್ಟು ಅಂಚೆ ಚೀಟಿಯನ್ನಿಟ್ಟು ಪೋಸ್ಟ ಮಾಡಿ ಬಂದ ಇನ್ನೇನು ತನಗೆ ನೌಕರಿ ಸಿಕ್ಕಿತು ಪರೀಕ್ಷೆಯ ಪರಿಣಾಮ ಹೊರಬೀಳುವಾಗ ತನಗೆ ನೌಕರಿಗಾಗಿ ಕರೆ ಬರಬೇಕಾದಲ್ಲಿ ನಾನು ಪುಣ್ಯವಂತ ! ದೇಶದಲ್ಲಿ ಸಹಸ್ರಾರು ಸುಶಿಕ್ಷಿತರು ನಿರುದ್ಯೋಗದಿಂದ ನರಳುವಾಗ !

ವಿಜಯ ಹೀಗೆಯೇ ಏನೇನೋ ಯೋಚಿಸುತ್ತಿದ್ದ

ನೋಟೀಸಿನಲ್ಲಿ ನಮೂದಿಸಿದ ತಾರೀಕು ಮೀರಿ ಹೋಯಿತು. ಶಾಲೆ ಕಾಲೇಜುಗಳು ಪ್ರಾರಂಭವಾದವು. ವಿಜಯಕುಮಾರನಿಗೆ ಯಾವ ಕರೆಯೋಲೆಯೂ ಬರಲಿಲ್ಲ. ಅವನು ನಿರಾಶೆಯೊಡನೆ ಅಧೀರನೂ ಆದ.

ಮುಂದೆ ಹೇಗೆ ?

ಎಂಬ ಪ್ರಶ್ನಾಕಾರದ ಚಿಹ್ನೆ ಅವನೆದುರು ಭೂತಾಕಾರವಾಗಿ ನಿಂತು ಹೆದರಿಸತೊಡಗಿತು. ಕೈಯಲ್ಲಿಯ ಕಾಸು ಸವೆಯುತ್ತ ಬಂದಿತ್ತು. ದಿನವೂ ಮುಂಜಾವಿನಿಂದ ಸಂಜೆಯವರೆಗೆ ಕೆಲಸಕ್ಕಾಗಿ ಅಲೆದಲೆದು ಸಾಕಾಯಿತು. ಎಲ್ಲಿಯೂ ನಿರಾಶೆಯೆ ಅವನಿಗೆ ಸ್ವಾಗತ ಬಯಸುತ್ತಿತ್ತು.

ಒಂದು ತಿಂಗಳಿನಿಂದ ಅಲೆದಾಡುತ್ತಿದ್ದರೂ ತನಗೊಂದ ಕೆಲಸ ದೊರೆಯಬಾರದೇ ?

ನಾನು ಇಷ್ಟು ಕಲಿತು ಏನು ಪ್ರಯೋಜನ ?

ನನ್ನ ಶಿಕ್ಷಣಕ್ಕೆ ಬೆಲೆಯಿಲ್ಲವೇ ?

ಒಂದು ತುತ್ತು ಅನ್ನ ಪಡೆಯಲೂ ನಾನು ಅಯೋಗ್ಯನೆ ?

ಛೆ !

ವಿಜಯ ನಡುಗಿದ. ಕಲಿಯದಿದ್ದರೆ ಚೆನ್ನಾಗಿರುತಿತ್ತೇನೊ ! ಕೂಲಿ ನಾದರೂ ಮಾಡಬಹುದಿತ್ತು. ಪದವಿಧರ– ಹಮಾಲ ! ಮನಸ್ಸು ಒಪ್ಪದು. ಹೊಟ್ಟೆಯ ಗತಿ ? ವಿಜಯ ತನ್ನ ಸಮಸ್ಯೆ ಕುರಿತು ಯೋಚಿಸಿದಂತೆ ನಾಡಿನ ಚಿತ್ರವೇ ಅವನೆದುರು ನಿಂತಿತು

ನಿರುದ್ಯೋಗದ ಸಮಸ್ಯೆ !

ದೇಶದಲ್ಲಿ ಸುಶಿಕ್ಷಿತರ ಒಂದು ಮಹಾ ತಂಡವೇ ಪ್ರಶ್ನಾಕಾರದ ಮಹಾ ಸಮಸ್ಯೆಯಾಗಿ ನಾಡ ನುಂಗಲು ಬಾಯಿ ತೆರೆದಿದೆ.

ಈ ಸಮಸ್ಯೆ ಹೇಗೆ ಬಿಡಿಸಬೇಕು ? ಹೇಗೆ ಬಿಡಿಸಬೇಕು ? ? ಹೇಗೆ? ? ?

ಒಂದೆ— ಎರಡೆ ! ಸಾವಿರ ಯೋಚನೆ ! !– ಒಂದಕ್ಕೂ ಪರಿಹಾರವಿಲ್ಲ

ಪೇಪರುಗಳಲ್ಲಿ ದಿನವೂ ಅನೇಕ 'Wanted' 'ಬೇಕಾಗಿದ್ದಾರೆ' ಜಾಹಿರಾತು ಪ್ರಕಟವಾಗುತ್ತಿದ್ದವು. ಎಲ್ಲದಕ್ಕೂ ವಿಜಯ ಉತ್ತರ ಬರೆಯುತ್ತಿದ್ದ—ಅಂಚೆ ಚೀಟಿಯಿಟ್ಟು ಎಲ್ಲ ಕಡೆಗೆ— ಕವಣೆ ಬೀಸಿದ ಕಲ್ಲಿನಂತೆ.

ಒಂದೆರಡು ಕಡೆ 'ಇಂಟರವ್ಯೂ'ಗೆ ಕರೆ ಬಂತು ಅಲ್ಲಿಯೂ ನಿರಾಶೆ. ಆಸೆ ತೋರಿಸಿ ಹೊಡೆದಟ್ಟಿದಂತೆ

— ಇದರ ಅರ್ಥವೇನು ?

— ತನ್ನಂತೆ ಸಾವಿರಾರು ಜನ ಅರ್ಜಿ ಬರೆಯುತಿರಬಹುದೆ ?

— ಅಲ್ಲಿಯೂ 'ವಶಿಲೆ' ಇರಬಹುದೆ ?

— ಇದೊಂದು ದೈವದಾಟವೇ ?

ಯೋಚಿಸಿದಷ್ಟೂ ವ್ಯಥೆ. ತನ್ನ ವಿದ್ಯೆ ಗೌರವದ ಮೇಲೆ ಅವನಿಗೆ ಜಿಗುಪ್ಸೆಯುಂಟಾಗತೊಡಗಿತು. 'ಏನು ಕಲಿತರೇನು' ಎಂಬ ಉದಾಸೀನ ಭಾವ ದಿನ ಕಳೆದಂತೆ ಬಲಿಯತೊಡಗಿತು. ಎಲ್ಲರೂ 'ನೌಕರಿಗಾಗಿ ವಿದ್ಯೆ' ಎಂದರೆ ಮೂವತ್ತಾರು ಕೋಟಿ ಜನರಿಗೆ ಉಂಟೆ? ಎಂಬ ವೇದಾಂತ ಈ ವೇದಾಂತ ಬಹಳ ಹೊತ್ತು ನಿಲ್ಲುತ್ತಿರಲಿಲ್ಲ.

ನಾಳೆ ಹೇಗೆ ?

ಎಂಬ ಭೂತಾಕಾರದ ಪ್ರಶ್ನೆ ವಿಜಯ ತನ್ನನ್ನೇ ಕೇಳಿಕೊಳ್ಳುತ್ತಿದ್ದ ಅನ್ನ ಬಟ್ಟೆಯ ಸಮಸ್ಯೆ ಬಗೆ ಹರಿಯಲಿಲ್ಲ ಇಂದು ನಮ್ಮ ಸಂಸ್ಕೃತಿ, ಶಾಂತಿ, ವಿಚಾರ, ವಿಕಾಸ ಎಲ್ಲಾ ಒಂದೇ ಏಟಿಗೆ ನುಂಗಲು ಬಾಯಿ ತೆರೆದು ನಿಂತಿದೆ— ಈ ನಿರುದ್ಯೋಗ ಸಮಸ್ಯೆ !

ವಿಚಾರ—ಯೋಚನೆ—ನಿಟ್ಟುಸಿರು—ಮತ್ತೆ ವಿಚಾರ

ಇವುಗಳ ಮಧ್ಯೆ ತೊಳಲಾಡುತ್ತಿತ್ತು ವಿಜಯನ ಮನಸು.

ಇನ್ನೂ ಒಂದು ತಿಂಗಳು ಉರುಳಿತು.

ವಿಜಯ ನಿರುದ್ಯೋಗಿಯೇ ಇದ್ದ. ಆತನಲ್ಲಿ ಎಂತಹದೋ ಒಂದು ಮಹತ್ವದ ಮಾರ್ಪಾಟಾಗಿತ್ತು. ವಾರ-ವಾರಗಳಿಂದ ಮುಖದ ಮೇಲೆ ಬೆಳೆದು ನಿಂತ ಗಡ್ಡ ಗಡೆ ಗಟ್ಟಿದ ತಲೆ ಕೂದಲು. ಮಾಸಿ ಮೂಲ

ಬಣ್ಣವನ್ನು ಬದಲಾಯಿಸಿದ ಬಟ್ಟೆ ನಿರಾಶೆಯಡರಿದ ಮುಖ ಜಗತ್ತಿನ ದುಃಖವನ್ನೇ ಪ್ರತಿಬಿಂಬಿಸುವ ಕಣ್ಣುಗೂಡಿನಲ್ಲಿ ಆಳವಾಗಿ ಹೊಕ ಗುಡ್ಡೆ. ಮುಂದೆ ಹಾಸ್ಯ ಮುಖದ ಮೂಳೆ

ಎಂತಹ ಮಾರ್ಪಾಟು ಅವನಲ್ಲಿ ! ಆ ವಿಜಯನೇ ಇವನು ?

ನೋಡಿದವರು ಒಪ್ಪುವಂತಿರಲಿಲ್ಲ. ಆದರೆ ಅದು ಕಟು ಸತ್ಯ—ಆ ವಿಜಯನೇ ಇವನು.

ಮಧ್ಯಾಹ್ನದ ಊಟ ?

— ನಿಟ್ಟುಸಿರೆ ಉತ್ತರ. ಶೂನ್ಯ ನೋಟವೇ ಗತಿ !

ಟೈಪು ಮಾಡಿಯೊ ಅರ್ಜಿ ನಕಲು ಬರೆದೊ ನಾಲ್ಕು ಕಾಸು ಬಂದಿತ್ತು. ಅಷ್ಟು ತೀರುವ ವರೆಗೆ ಹೊಟ್ಟೆ ಉಸಿರೆತ್ತಲಿಲ್ಲ

ಇಂದು ಮಾತ್ರ ಮುಂಜಾವಿನಿಂದ ಅಲೆಯುತ್ತಿದ್ದರೂ ಒಂದು ಕಾಸಿನ ಗಳಿಕೆ ಇಲ್ಲ ಓಹ ! ಹಸಿವು !! ಹಸಿವು !!!

ವಿಜಯ ಎಡವುತ್ತಿದ್ದ ಹೊಟ್ಟೆ ಹಸಿವಿನ ಕೋಲಿನಿಂದ ಮುಂದೆ ದೂಡುತ್ತಿತ್ತು ಅವನಿಗೆ ಪ್ರಜ್ಞೆ ಇರಲಿಲ್ಲ

ಮಧ್ಯಾಹ್ನದ ಬಿಸಿಲು ರಣಗುಡುತ್ತಿತ್ತು ಊರಿನ ಬೀದಿಗಳಲ್ಲೆಲ್ಲ ಅಲೆದಾಡಿ ಅವನ ಕಾಲು ಸೋತು ಹೋಗಿತ್ತು. ಹೊಟ್ಟೆ-ಹಸಿವಿನ ದಾಹ ಬಿಸಿಲಿನ ಬೇಗೆಯಂತೆ ಹೆಚ್ಚಾಗ ತೊಡಗಿತ್ತು

ಹಸಿವು-ಹೊಟ್ಟೆ-ನಿರುದ್ಯೋಗ.

ಮೂರು ಮಹಾ ಜ್ವಾಲೆಯಲ್ಲಿ ಅವನ ಜೀವನ ಸುಡುತ್ತಿತ್ತು ಪ್ರಪಂಚ ಗಹಗಹಿಸಿ ನಗುತ್ತಿತ್ತು

ಹ್ಹ ಹ್ಹ ಹ್ಹ ಹ್ಹಾ !!

ವಿಕಟಹಾಸ-ಪ್ರಪಂಚದ ನಗೆ-ತಿರಸ್ಕಾರ.

ಅವನ ಲಕ್ಷ್ಯ ಆ ಕಡೆ ಇರಲಿಲ್ಲ

ಹಸಿವಿನ ಒಡಲಿಗೆ ಇಂಥ ಸುಶಿಕ್ಷಿತನಾದ ನಾನು ಬಲಿ ಬೀಳುತಿರುವಾಗ ಅಶಿಕ್ಷಿತ ಬಾಂಧವರ ಪಾಡೇನು ? ಇಂಥ ದುರ್ಮರಣ ಇನ್ನು ಎಷ್ಟು ದಿನ ಈ ಭೂಮಿಯಲ್ಲಿ ? ಈ ಕಗ್ಗೊಲೆಗೆ ಕೊನೆ ಎಂದು ? ಎಂದು ??

— ಕ್ರಾಂತಿ ! ಸಮಾಜ ಕ್ರಾಂತಿ ! ಕ್ರಾಂತಿಯಾಗಬೇಕು ಬಂಡವಾಳಶಾಹಿ, ವಶೀಲಿ, ಲಂಚ ಮುಂತಾದವುಗಳ ಬೇರು ಸಹಿತ ಉಚ್ಚಾಟನೆಯಾಗಬೇಕು.

ಈ ಸಮಸ್ಯೆ ರಾಷ್ಟ್ರೀಯವಾದದ್ದು. ಇದನ್ನು ಬೆಳೆಯ ಗೊಟ್ಟರ ಅರಾಷ್ಟ್ರೀಯತೆ, ಪರಾಧೀನತೆ. ಮತ್ತೆ ದಾಸ್ಯ.. ...! . ಹೂಂ ! ಇದು ಬ್ರಹ್ಮ ರಾಕ್ಷಸ !

ಅವನ ವಿಚಾರವೇಗಕನುಗುಣವಾಗಿ ಕಾಲೂ ವೇಗವಾಗಿ ಹೆಜ್ಜೆ ಹಾಕ ಲಾರಂಭಿಸಿದ್ದುವು ಅವನ ನೋಟ ಶೂನ್ಯದತ್ತ !

ಆ ನೋಟದಲ್ಲಿ ನಿರ್ಧಾರವಿತ್ತು—ಭಯಂಕರ ನಿರ್ಧಾರ !

ಮೂರನೆಯ ದಿನ ವಿಜಯ ಕೆರೆಯ ದಂಡೆಯ ಮೇಲೆ ತೇಲಿ ಬಂದ

“ ಅಬ್ಬಾ ! ಆತ್ಮಹತ್ಯೆ ! !

ಜನ ಮೂಗಿನ ಮೇಲೆ ಬೆರಳಿಟ್ಟುಕೊಂಡು ಆಶ್ಚರಿ ಪಟ್ಟಿತು. ಗುಂಪು ಗುಂಪಾಗಿ ಬಂತು ನೋಡ ತೊಡಗಿತು.

ಕೆರೆಯ ದಂಡೆಯ ಮೇಲಿನ ಆಲದ ಮರ ಜನ ಒಮ್ಮೆಲೆ ಅತ್ತ ಕಡೆಗೆ ಧಾವಿಸಿತು. ಪೋಲೀಸ್ ಅಧಿಕಾರಿ ಚೀಟಿ ಓದುತ್ತಿದ್ದ

‘ ಹೊಟ್ಟೆಗಿಲ್ಲವೆಂದು ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಹೇಡಿ ನಾನಲ್ಲ ನಾಡಿನಲ್ಲಿಯ ಭೀಕರ ಸಮಸ್ಯೆ ತನ್ನ ಉರಿನಾಲಗೆಯಿಂದ ಎಂತೆಂಥ ವ್ಯಕ್ತಿಗಳನ್ನು ಬಲಿ ತೆಗೆದುಕೊಳ್ಳುತಿದೆ ಹೊಟ್ಟೆಯ ಒಂದು ತುತ್ತು ಕೂಳಿಗಾಗಿ ಮನುಷ್ಯ ತನ್ನ ಮಾನವತ್ವವನ್ನೇ ಮಾರಿಕೊಳ್ಳುತಲಿರುವ ಈ ರುದ್ರ ಭೀಕರ ಪರಿಸ್ಥಿತಿ ! ! ಜೀವ ಬೇಡವಾಯಿತು. ನನ್ನ ಬಲಿದಾನ ಸಾರ್ವಜನಿಕರಿಗೊಂದು ಎಚ್ಚರಿಕೆ. ಹಸಿದ ಜನ ರುದ್ರ ರೂಪ ತಾಳಿದೆ ಎಚ್ಚರಿಕೆ ! ‘ಶ್ರೀಮಂತ ವರ್ಗ ಅಧಿಕಾರಿ ವರ್ಗ ಬಂಡವಳದಾರರು ಇನ್ನು ಶೋಷಣೆ ನಿಲ್ಲಿಸಿ ಹೊಸ ನಾಡ ಕಟ್ಟಲು ಸಿದ್ಧರಾಗದಿದ್ದರೆ ಭೀಕರ ಹತ್ಯಾಕಾಂಡ ಹಾ ಹಾ ಕಾರ ಅಶಾಂತಿಯ ಭುಗಿಲ್ಲು ಮುಗಿಲು ಮುಟ್ಟಲು ತಡ ಹಿಡಿಯಲಾರದು—

ಎಚ್ಚರಿಕೆ ! ! ”

# ಮುರಿದ ಮನೆ

卐

೧೯೪೦

ಆಗಲೇ ಎರಡನೇ ಮಹಾಯುದ್ಧ ಪ್ರಾರಂಭವಾಗಿ ಹೋಗಿತ್ತು ಪ್ರಪಂಚದ ಮಾನವೀಯತೆಯನ್ನೇ ನಾಶ ಮಾಡುವ ಮಹಾಯುದ್ಧ. ಎರಡು ಮಹಾ ಅವಿವೇಕಿಗಳ ಕೋಣ ಕಾದಾಟದ ಮಧ್ಯೆ ಮಾನವೀಯತೆಯ ಜರ್ಜರ ! ಪ್ರಪಂಚವನ್ನೇ ವ್ಯಾಪಿಸಿದ ಆ ಮಹಾಯುದ್ಧ ಭಾರತಕ್ಕೂ ತನ್ನ ಉರಿನಾಲಿಗೆಯನ್ನು ಚಾಚಿತು.

ಚಾಚಿತು. ಭಾರತಕ್ಕೂ ತನ್ನ ಉರಿನಾಲಿಗೆಯನ್ನು ಚಾಚಿತು ಸೈನ್ಯ ಜಮಾವಣೆಗೆ ಪ್ರಾರಂಭವಾಯಿತು.

" ವಾರ್ ಟೈಂ "

ಜನತೆಯ ಮುಖದಲ್ಲಿ ಅದೊಂದೇ ವಾಕ್ಯ– ವಾರ್ ಟೈಂ.

" ಬೆಲೆ ಇಷ್ಟು ಹೆಚ್ಚಿಗೆಯಾಯಿತೆ ? "

" ಗೊತ್ತಿಲ್ವೆ ? – ಇದು ವಾರ್ ಟೈಂ ! "

" ಸೀಮೆ ಎಣ್ಣೆ ಇದೆಯೆ ? "

" ವಾರ್ ಟೈಂ. ಸಿಕ್ಕಾಪಟ್ಟೆ ಏರಿದೆ ಧಾರಣೆ. ಒಂದು ರೂಪಾಯಿಗೆ ಪಿಂಟ್ ".

ಅಕ್ಕಿ ? "

" ರೂಪಾಯಿಗೆ ಸೇರು. ಇದು ವಾರ್ ಟೈಂ "

" ಸಕ್ಕರೆ ? "

" ಇಲ್ಲ "

" ಬಟ್ಟೆ ? "

" ಊ ಹೂಂ "

ಓಹ ! ಎಲ್ಲಿದಕ್ಕೂ ' ವಾರ್ ಟ್ಯಾಂ ' ಜನ ಜೀವನ ಕಷ್ಟವಾಯಿತು ವಾರ ಟ್ಯಾಂ. ಅದರ ಜತೆಗೆ ' ಬ್ಲ್ಯಾಕ್ ಮಾರ್ಕೇಟ್ ' ಯಾನೆ 'ಕಾಳ ಸಂತೆ'

ಏರಿದರು ಬಾಂಡವಳದಾರರು–ಸ್ವರ್ಗದ ಸೋಪಾನವನ್ನು. ಇಳಿದರು ಬಡವರು ನರಕದ ಕುಂಡವನ್ನು. ತೂಗಾಡ ತೊಡಗಿದರು ಮಧ್ಯಮ ವರ್ಗದವರು ಅಚೆಗೊಂದು ಕೈ ಇಚೆಗೊಂದು ಕೈ – ಅದು ವಾರ ಟ್ಯಾಂ !

ಹುಸೇನ್ ತನ್ನ ಜೀವನ ಸಾಗಿಸುವದು ತುಂಬಾ ಕಷ್ಟಕಿಟ್ಟುಕೊಂಡಿತು ಮುಂಜಾವಿನಿಂದ ಸಂಜೆಯ ವರೆಗೂ ಯಂತ್ರದಂತೆ ದುಡಿತ ಯಂತ್ರದ ಜತೆಯಲ್ಲಿಯೆ ಆದರೂ ಹೊಟ್ಟೆ ತುಂಬಾ ಅನ್ನ ದೊರೆಯುವದು ದುರ್ಲಭ

ವಾರ್ ಟ್ಯಾಂ

ಗಿರಣಿಗಳು ರಾತ್ರಿ ಪಾಳಿಯನ್ನೂ ಪ್ರಾರಂಭ ಮಾಡಿದವು. ಇಪ್ಪತ್ತು ನಾಲ್ಕು ತಾಸು ದುಡಿದರೂ ದಿನ ಸಾಲುತಿರಲಿಲ್ಲ ದುಡಿದ ದೇಹ ವಿಶ್ರಾಂತಿಗೆ ಸಾಲುವಷ್ಟು ನಿದ್ರೆಯೂ ಪಡೆಯದಾಯಿತು. ಕಣ್ಣು ಯಾವಾಗಲೂ ಕೆಂಪು ಊದಿಕೊಂಡಂತೆ. ಆಲಸ್ಯ ಬೆಳೆಯ ತೊಡಗಿತು. ದೇಹ ಕ್ಷೀಣಿಸತೊಡಗಿತು. ಸುಖಸಾಗರದಲ್ಲಿ ತೇಲಾಡುವ ಪುಟ್ಟ ಸಂಸಾರ ಸಹರಾ ಪ್ರದೇಶದ ಮರುಭೂಮಿ ಯಲ್ಲಿ ನೀರಿಲ್ಲದೆ ಚಡಪಡಿಸುವಂತಾಯಿತು.

ಅಶಾಂತಿ – ಅಸಂತೋಷ – ಅತೃಪ್ತಿ.

ಮೂರು ಮಹಾಜ್ವಾಲೆಗಳು ಹುಸೇನನ ಜೀವನ ಸುಡತೊಡಗಿದವು.

" ಊರ ಹೊರ್ಗಿನ ಬಂಗ್ಲೆದಾಗ ಕುರ್ಕುಟಿಂಗ ಸಾಬ್ರು ಬಂದಾರೂ. ……. .. ….ಯಾರಾದ್ರೂ ಮಿಂಟ್ರೆ ಬರ್ತಿ ಆಗಾವ್ರಿದ್ರ ನಾಳಿ ಹರ್‍ಯಾಗ ಬರಬೇಕ್ರೆಪ್ಪೊ ...! .. !....!....... ಢಣ್....ಢಣ್....ರಣ್ . "

ಮುನಸೀ ಪಾಲ್ಟಿಯ ಕಸಗೂಡಿಸುವ ಆಳು ಎತ್ತರದ ದನಿಯಲ್ಲಿ ಡಂಗುರ ಸಾರತೊಡಗಿದ್ದ.

ಡಂಗುರದ ದನಿ ಹುಸೇನನ ಕರ್ಣ ಪಟಲಿಗೆ ತಲುಪಿತು. ಒಂದು ಕ್ಷಣ ಆತುರದಿಂದ ಆಲಿಸಿದ ವಿಚಾರಿಸಿದ- ಮೌನವಾಗಿ ಪ್ರಶಾಂತವಾದ ಮಹಾಸಾಗರದ ಗರ್ಭದಲ್ಲಿ ನಡೆಯುವ ಆಲ್ಲೋಲ ಕಲ್ಲೋಲದಂತೆ.

" ನಾನೂ ಮಿಂಟ್ರಿ ಯಾಕ ಸೇರ್ಬಾರ್ದು ? "

ತನ್ನನ್ನೇ ತಾನು ಪ್ರಶ್ನಿಸಿಕೊಂಡ. ಮರುಕ್ಷಣ ಅವನ ಕಣ್ಣೆದುರಿಗೆ ಹೆಂಡತಿ – ತಾರಾ, ಮಗ – ಕಬೀರ, ಇಬ್ಬರ ಮುಖ ಸುಳಿದವು.

ಇವರ ಗತಿ ? ನನ್ನನ್ನೇ ನಂಬಿದ ' ಇವಳ ' ಕುತ್ಗಿ ಕೊಯ್ದ್ಲ್ಯಾ ? ಪಾಪ ! ಐದು ತಿಂಗಳ ಬಸುರಿ ' ಎಂದುಕೊಂಡ ಅವನ ಕಣ್ಣೆದುರು ಗಿರಣಿಯೊಡೆಯರ ರುದ್ರ ಕಠೋರ ಮುಖ. ಆ ಶೋಷಣೆ, ಆ ದಬ್ಬಾಳಿಕೆ, ಆ ದುಡಿತ ಅತ್ಯಾಚಾರ ಸುಳಿಗೆ ! ಛೆ–ಛೆ! ' ನಾ ಮಿಂಟ್ರಿ ಶೇರಾಕ ಬೇಕು' ಹುಸೇನ ನಿರ್ಧಾರದ ಗೋಣು ಹಾಕಿದ.

ನಾ ಲಢಾಯದಾಗ ಸತ್ರ ? !

ಈ ಕಟು ಸತ್ಯ ಅವನ ಎದೆಯನ್ನೇ ನಡುಗಿಸಿತು ' ಯುದ್ಧದಾಗ ಸತ್ರ ಹೆಂಡ್ತಿಗೆ ಯಾರ ದಿಕ್ಕು ? . ....ಹಾಂಗಾದ್ರ .. .ಹಂಗಾದ್ರ ಊ .. ಹೂಂ ನಾ ಶೇರಾಕ ಬೇಕು '

ರಾತ್ರಿ ಊಟದ ಸಮಯದಲ್ಲಿ ಹೆಂಡತಿಯೆದುರು ತನ್ನ ವಿಚಾರ ಹೇಳಿದ. ತಾರಾ ಗೋಳಿಟ್ಟಳು. ಕಣ್ಣೀರು ಕಾಲುವೆ ಹರಿಸಿದಳು ಮಾಂಗಲ್ಯದಾಣೆ ಇಟ್ಟಳು ಹುಸೇನ್ ಎಲ್ಲದಕ್ಕೂ ಮೌನ ಆ ಮೌನದಲ್ಲಿ ಎಂತಹ ನಿರ್ಧಾರ !

ಹುಸೇನ್ ಕರ್ತವ್ಯ ಮೋಹಗಳ ನಡುವೆ ಸಿಕ್ಕು ತೊಳಲಾಡತೊಡಗಿದ್ದ.

ಹುಸೇನ್ ಸೈನ್ಯ ಸೇರ್ಪಡೆಗೆ ಯಾವ ತೊಂದರೆಯೂ ಆಗಲಿಲ್ಲ ಅವನನ್ನು ' ಭರ್ತಿ ' ಮಾಡಿದ ಶ್ರೀಮಂತ ತನ್ನ ಸಂಖ್ಯೆ ಪೂರ್ಣ ಮಾಡಿ ' ರಾವಸಾಹೇಬ ' ಬಿರುದು ಸಂಪಾದಿಸಿದ.

ತಾರಾ .. ! ಅವಳ ದುಃಖಕ್ಕೆ ಕೊನೆ ಇದೆಯೆ ! !

❖ ❖ ❖ ❖

## ಗೆಳತಿ

ವರುಷಗಳಾರು ಉರುಳಿ ಹೋಗಿವೆ– ಆರು.

ಹುಸೇನ್ ಮನೆಗೆ ಮರಳುತ್ತಿದ್ದಾನೆ. ಅವನಿಗೆಷ್ಟು ಉತ್ಸಾಹ ! ಯುದ್ಧದಲ್ಲಿ ಶೌರ್ಯ ಪ್ರದರ್ಶಿಸಿ ಆರು ಸಾವಿರದ ಬಹುಮಾನ ಸಂಪಾದಿಸಿದ್ದಾನೆ. ಮಗನಿಗಾಗಿ ಅದೆಷ್ಟೋ ತೆರದ ಅರಿವೆಗಳು, ಹೆಂಡತಿಗಾಗಿ ಬಟ್ಟೆ–ವಡವೆಗಳು, ಚಿಕ್ಕ– ತಾನು ಒರುವಾಗ ತಾಯಿಯ ಗರ್ಭದಲ್ಲಿದ್ದ– ಮಗುವಿಗೂ ಅಂಗಿ ಅರಿವೆಗಳು ಹೊರಲಾರದಷ್ಟು ಸಾಮಾನು !

ಉತ್ಸಾಹ–ಆನಂದ–ಹಿಗ್ಗು.

ಮೂರು ಮಹಾಸಾಗರಗಳ ಮಧುರ ಮಿಲನ ಹುಸೇನನ ಹೃದಯದಲ್ಲಿ. ದೇಹ ಮಾತ್ರ ರೈಲಿನಲ್ಲಿ. ಮನಸ್ಸು ಹೆಂಡಿರು ಮಕ್ಕಳೊಡನೆ ಮಾತನಾಡ ತೊಡಗಿದೆ ಮಗು ಕಬೀರ, ಎಷ್ಟು ಮುದ್ದಾಗಿ ಬೆಳೆದಿದ್ದಾನೆ ! ಚಿಕ್ಕ ಮಗೂ ? ಹೆಸರೇನು ? ಹೆಸರು ಇರಲಿ ಎಷ್ಟು ಮುದ್ದಾಗಿದೆ–ಹೆಣ್ಣು ಮಗು ತಾಯಿಯಂತೆಯೇ ಇದೆ. ಅವಳು ? ಉಫ್ ! ಎಷ್ಟು ಸೊರಗಿದ್ದಾಳೆ ಪಾಪ ! ಆರು ವರುಷದ ವಿರಹ ! ಜತೆಗೆ ಅಸಹ್ಯ ಕಷ್ಟದ ಅನುಭವ. ತಾರಾ . ತಾರಾ , ... ಸೊರಗಿ ಕಡ್ಡಿಯಾಗಿದ್ದಾಳೆ ಆದರೂ ಆ ಸೌಂದರ್ಯ ಪೂರ್ಣ ವಾಯವಾಗಿಲ್ಲ ಯಾವುದೋ ಒಂದು ಆಸೆ ಅವಳ ಕಣ್ಣಲ್ಲಿ ಹೂತುಕೊಂಡಿದೆ. ಅದೆ–ಅದೆ ! ತನ್ನ ಆಗಮನದಾಸೆ ಆ ಆಸೆ ಪೂರ್ಣವಾಯಿತಲ್ಲ. ನಾನು ಬಂದೆ. ಇನ್ನು ಚಿಂತೆಯಿಲ್ಲ ತಾರಾ.... ... ನನ್ನ ತಾರಾ ... ... ತಾರಾ . ..

ಯಾವುದೋ ನಿಲ್ದಾಣ ಬಂದಿರಬೇಕು. ಜನರ ಗಡಿಬಿಡಿ.

" ಏಯ್ ! ತೂಕಡಿಸ್ತೀಯಾ ? ಬಿದ್ದಿಯೆ ".

ಮುದುಕ ಎಚ್ಚರಿಸಿ ರೈಲು ಇಳಿದ. ತಾನು ಕಾಣುತ್ತಿರುವುದು ಕನಸೆ ! ಆದರೂ ಎಷ್ಟು ಮಧುರ ! ಕನಸಲ್ಲವಿದು. ಬರುವ ನನಸಿನ ನೆನಹು.

ಎಷ್ಟು ನಿಧಾನವಾಗಿ ಓಡುತ್ತಿದೆ ಈ ಹಾಳು ರೈಲು.

ಅಂತೂ ಒಮ್ಮೆ ರೈಲು ನಿಲ್ದಾಣ ಸೇರಿತು. ನೂಕು ನುಗ್ಗಲು ಲೆಕ್ಕಿಸದೆ ಪ್ಲಾಟ ಫಾರ್ಮ ದಾಟಿ ಬಂದ.

“ ಏರ್ ಟಿಕೆಟ್ ”

“ ಓಹ ! ಸಾರಿ ! ”

ಟಿಕೇಟ ಕೊಟ್ಟು ಹೊರಬಂದ. ಈ ಊರು, ಈ ಬೀದಿ, ಈ ಸ್ಥಳ ಆರು ವರುಷದ ನಂತರ ಪುನಃ ಕಾಣುತಿದೆನೆ. ಎಷ್ಟು ಹೆಮ್ಮೆ !

“ ಓ ... ... ಟಾಂಗಾ ಟಾಂಗಾ ... ... ”

“ .. ”

“ ಹಾಳು ಟಾಂಗಾನೂ ಇರಬಾರ್ದೆ ! ”

ಹೊರಲಾರದ ಸಾಮಾನಿನ ಮೂಟೆ ಹೊತ್ತು ಹುಸೇನ್ ಮನೆಗೆ ನಡೆದ.

ಈ ಮನೇನೂ ಬೇಗ ಬರ್ಬಾರ್ದೆ ? ಎಷ್ಟು ಬೆಳೆದಿದೆ ಈ ಊರು !

ಇದೇ ಮನೆ ಇಲ್ಲಿಯೂ ಮಿಂಚು ಬೆಳಕು ಆಗಿದೆಯೆ ಬಾಗಿಲು ಹಾಕಿದೆ ಗಂಟೆ ಹತ್ತು ಮಲಗಿರಬೇಕು–ತಾರಾ.

“ ತಾರಾ ತಾರಾ . ”

“ .. .. ”

“ ಟಕ್ ಟಕ್ . ”

“ .. .. ”

“ ಹ್ಹಾಂ ! ! ”

ಹುಸೇನ್ ಬೆಚ್ಚಿ ಬಿದ್ದ ಮನೆಗೆ ಬೀಗ ! ತಾರಾ ಎಲ್ಲಿಯಾದರೂ ಹೋಗಿರಬಹುದೆ ? ಇಷ್ಟು ರಾತ್ರಿಯಲ್ಲಿ !

ಅವನಿಗೆ ತುಂಬ ನಿರಾಸೆ

ಚ್ ! ಅವಳಿಗೆ ತುಂಬಾ ದುಡಿತ. ಮೂರು ಜೀವಿಗಳ ಹೊಟ್ಟೆ ! ಸರಿ. ಹತ್ತು ನಿಮಿಷದಲ್ಲಿ ಬರಬಹುದು.

ಹತ್ತು ನಿಮಿಷ ಕಳೆದವು, ತಾರಾ ಬರಲಿಲ್ಲ

ಹುಸೇನನಿಗೆ ಸಿಟ್ಟು ಜತೆಗೆ ಬೇಸರ ಪಕ್ಕದ ಮನೆಯಲ್ಲಿ ಕೇಳೋಣ ಎಲ್ಲಿಗೆ ಹೋಗಿದ್ದಾಳೊ ಕರೆದುಕೊಂಡಾದರೂ ಬರಬಹುದು.

ಪಡಸಾಲೆಯ ಜಗುಲಿಯಲ್ಲಿ ಫಾತಮ್ಮ ಕುಳಿತಿದ್ದಳು. ಹಣ್ಣು ಹಣ್ಣಾಪ್ಪೆ. ಮುಪ್ಪಿನ ಕಳೆ ಮುಖದಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡಿದೆ.

“ ತಾರಾ ಎಲ್ಲಿ ಫಾತಮ್ಮ ? ”

“ ಯಾವ ತಾರಾನೊಪ್ಪ !

ಹ್ಞಂ ? ವಿಚಿತ್ರ ಪ್ರಶ್ನೆ – ಎಂತಹ ವಿಚಿತ್ರ ! ವಯಸ್ಸಿಗನುಗುಣವಾಗಿ ಮುದುಕಿಯ ಜ್ಞಾಪಕ ಶಕ್ತಿಯೂ ಕಡಿಮೆಯಾಗಿರಬಹುದು, – ಸಹಜ. ಆದರೂ ನೆರೆಮನೆಯ – ಅದೂ ಮಗಳಂತಿರುವ ತಾರಾ, ‘ ತಾರಾ ಎಲ್ಲಿ ? ’ ಎಂದು ಕೇಳಿದರೆ ‘ ಯಾವ ತಾರಾ ’ ಎನ್ನಬೇಕೆ ?

ಹುಸೇನ್ ಅವಕ್ಕಾಗಿ ನಿಂತಿದ್ದ.

“ ಏನಪ್ಪ ನಿಮ್ಮ ಹೆಸರು ? ಯಾವೂರೋರು ? ”

“ ನಾನು ಹುಸೇನ್ ಫಾತಮ್ಮ. ತಾರಾ ಎಲ್ಲಿ ಹೋಗಿದಾಳೆ ? ”

“ ಯಾರು–ಹುಸೇನನೆ ? ಬಾಪ್ಪ ತಮ್ಮ ಕುಂತ್ಕೊ ಯಾವಾಗ ಬಂದಿ ? ಪಾಪ – ಪಾಪ ! ”

ಎಲ ! ‘ ಪಾಪ ’ ? ಇದೇನಿದು ?

“ ಆ ಮೇಲೆ ಬರ್ತೀನಿ ಫಾತಮ್ಮ ತಾರಾ ಎಲ್ಲಿ ಹೇಳು. ”

“ ಏನ ಹೇಳ್ಲಿ ಮಗೂ, ನೀನು ದುರ್ದೈವಿ ! ”

ಹುಸೇನ್ ಒಮ್ಮೆಲೆ ಆಕಾಶದಿಂದ ಪಾತಾಳಕ್ಕೆ ಇಳಿದು ಹೋದ. ಮುಗಿಲೇ ಅವನ ಮೇಲೆ ಕುಸಿದಂತಾಯಿತು. ಅವನು ಕುಸಿದ.

“ ನೀ ಹ್ವಾದ ಮ್ಯಾಗ ತಾರಾ ತೀರಿಕೊಂಡ್ಳು ಹುಸೇನ್. ಅಲ್ಲಾನ ಮರ್ಜಿ ಹಂಗಿತ್ತು ”

“ ಹ್ಞಾಂ !........ ? ........ ! ”

ಹುಸೇನನಿಗೆ ಮುಂದಿನ ವಾಕ್ಯ ಬೇಕಾಗಿರಲಿಲ್ಲ ತಾರಾ – ತನ್ನ ತಾರಾ ಅಯ್ಯೊ ! ತನ್ನ ಕೊರಗಿನಲ್ಲಿಯೇ ಹೋದಳೆ ಹೊಟ್ಟೆಗಾಗಿ ತೀರಿದಳೆ !

ಗತಿಯಿಲ್ಲವೆಂದು ತೀರಿದಳೆ ! ತಾನು ಹೋದೆನೆಂದು ಪ್ರಾಣತ್ಯಾಗ ಮಾಡಿದಳೆ !
ಹೇಗೆ .. ಹೇಗೆ ತೀರಿದಳು ತಾರಾ ? ಹೇಗೆ ? ? ... .. ಹೇ ...ಗೆ... ?
...ತಾ ರಾ .. ನೆ ...ನ್ನ .. ತಾ. ರಾ

ಹುಸೇನ್ ಮೌನವಾಗಿದ್ದ ಕಣ್ಣೀರು ಕಾಲುವೆಯಾಗಿ ಹೊಳೆಯಾಗಿ ಮಹಾ ಸಾಗರವಾಗಿ ಹರಿಯಿತು. ಬತ್ತಿತು.

ನಿಧಾನವಾಗಿ ದುಃಖದ ಆವೇಗ– ನೆರೆ ಬಂದ ಮಹಾನದಿ ನಿಧಾನವಾಗಿ ಇಳಿಯುವಂತೆ – ನಿಧಾನವಾಗಿ ಇಳಿಯ ತೊಡಗಿದಾಗ— ತಾರಾ ಹೇಗೆ ತೀರಿದಳು ?

" ದುಃಖ ಪಟ್ಟು ಏನ ಉಪಾಯ ಮಗೂ ! ಹ್ಯಾದ ತಾರಾ ಬಂದಾಳೆ ? ಸುಮ್ಮಕಿರು "

" ತಾರಾ ಹ್ಯಾಂಗೆ ಸತ್ಲು ಪಾತವ್ವ ?

" ದೊಡ್ಡ ದುರಂತ ಹುಸೇನ್ ದೊಡ್ಡ ದುರಂತ ! "

ಮುದುಕಿ ನಿಟ್ಟುಸಿರ್ಗರೆಯಿತು. ಹುಸೇನ್ ಅವಳನ್ನೇ ನೋಡುತ್ತಿದ್ದ

" ಹುಸೇನ್ ಶ್ರೀಮಂತ್ರು ಬಡವರ ಮ್ಯಾಗ ಮಾಡೋ ಅನ್ಯಾಯಕ್ಕ ಲೆಕ್ಕ ಐತೆ ? ಇಂಥಾವು ಎಷ್ಟು ನಡೆದಾವೊ-ಇನ್ನು ! ಬಡವ್ರಿಗೆ ರೂಪ ಇರಬಾರ್ದು ಬಡವರ ರೂಪ, ಶೀಲ, ಸೌಂದರ್ಯ ತಮ್ಮ ಸೊತ್ತು ಅಂತ ಶ್ರೀಮಂತ್ರು ತಿಳಕೊಂಡಾರು ಹುಸೇನ್, ಶ್ರೀಮಂತ್ರು ಏನ್ಮಾಡಿದ್ರೂ ಬಡವ್ರು ತಾಳಿಕೋಬೇಕು. ಯಾಕಂದ್ರ – ಅವ್ರು ಬಡವ್ರು !

ನೀ ಹ್ಯಾದ ಮ್ಯಾಗ ಮೂರ್ನಾಕ ತಿಂಗ್ಳು ದುಡ್ಡು ಕಳಿಸಲಿಲ್ಲಾ ಪಾಪ ! ಅದು ಹೆಣ್ಣು ಏನು ಮಾಡೀತು. ಬಹುರಿ ಬ್ಯಾರೆ ! ಏನೋ ಪ್ರಯತ್ನ ಮಾಡಿ ಕಂಡಾವ್ರು ಕಾಲಿಡ್ದು ಗಿರಣ್ಯಾಗ ನೀ ಬಿಟ್ಟ ಜಾಗಾ ಖಾಲಿ ಇತ್ತಂತೆ ಅದನ್ನ ಹಿಡದ್ಲು. ಆಕೆ ಕೆಲಸಾ ನೋಡಿ ಗಿರಣಿ ಮಾಲಕ ತನ್ನ ಆಫೀಸ್ನ್ಯಾಗ ಕೆಲಸಾ ಕೊಟ್ಟಂತ. ಆಕೀ ರೂಪದ ಮ್ಯಾಗ ಮೊದಲಿಂದೂ ಆವಂದ ಕಣ್ಣಿತ್ತಂತ.

ಒಂದ ದಿನಾ ಮಿಲ್‌ಗ ರಜಾ ಇತ್ತಂತ ಆದ್ರ ತಾರಾನ್ನ ಆಫೀಸ ಕೆಲಸ ಅಂತ ಕರಿಸಿ ಕೊಂಡ್ನಂತ ಹಾಗೆ – ಹಾಗೆ ಮಾತಾಡಿ ತನ್ನ ಕೆಟ್ಟ ಬಯ್ಕಿ ಹೇಳಿದ್ನಂತ ಪಾಪ ! ತಾರಾ ಹುಡುಗಿ ಚೀರ್‍ಕೊಂಡ್ರೂ ಬಡಿಕೊಂಡ್ರೂ ಉಪಯೋಗ ಆಗಲಿಲ್ಲ ಮೊದಲೇ ಎಲ್ಲಾ ಯುವಸ್ಥಾ ಮಾಡಿಟ್ಟಿರಬೇಕು. ಆದ್ರೂ ಹುಡುಗಿ ಗಟ್ಟಿ ನೋಡು ”

ಪಾಶಮ್ಮಸಿಗೆ ಆ ದಾರುಣ ಕಥಾ ವಿವರಣೆಯಲ್ಲಿಯೂ ಹೆಮ್ಮೆ ಉದಿಸಿ ಎದೆಯುಬ್ಬದಿರಲಿಲ್ಲ. ಕಣ್ಣು ಹನಿ ಒರೆಸಿಕೊಂಡು ಮತ್ತೆ ಹೇಳತೊಡಗಿದಳು—

“ ಮೂಲ್ಯಾಗ ಅವಂದ ೩ ಬೆತ್ತದ ಬಡ್ಗಿ ಇತ್ತಂತ ಅದರ್ಲೆನ ತೆಲಿಗಿ ಒಂದೇಟು ಹಾಕಿದ್ಲಂತ. ಆವ ಎಚ್ಚರತಪ್ಪಿ ಬಿದ್ದಂತ ತಾರಾ ಬಾಗಲಾ ತಗದ ಊರೇಕಡೆ ಓಡಾಕ ಹತ್ತಿದ್ಲಂತ, ಮಾಲಕನ ಆಳು–ಆ ಶಿವ್ಯಾ ಹೊರಗ ಕಾವ್ಲಿ ಮಾಡ್ತಾನಲ್ಲ– ತಾರಾಗ ಹಿಡ್ಯಾಕ ಬಂದಂತ. ಇನ್ನು ನನ್ನ ಮಾನಾ ಉಳಿಯೋದಿಲ್ಲಂತ ತಿಳ್ದ ತಾರಾ ಅಲ್ಲೆ ಇದ್ದ ಭಾವಿ ಹಾರಿದ್ಲಂತ. ಶಿವ್ಯಾ ಊರಕಡೆ ಓಡಿಬಂದ ನಮಗೆಲ್ಲಾ ಹೇಳ್ದಾ ನಾವೆಲ್ಲಾ ಅತ್ತ ಧಾವಿಸ್ದಿವು ನಾಕ ಜನಾ ಇಳ್ದು ತಾರಾನ್ನ ತಗದ್ರು ಆದರ ತಾರಾ ಹೋಗಿದ್ಲು ! ತಾರಾನ್ನ ಬಿಟ್ಟು ಆ ಮಲೀ ಕುಡ್ಯೋ ಕುಸ್ವರ ಹೆಂಗ ಬದಕೀತು ? ಅದೂ ಹೋತು. ”

ಮುದುಕಿ ಕಣ್ಣೀರೊರಸಿಕೊಂಡು ಹೇಳಿದಳು.

ಹುಸೇನ್ ಅವಳ ಜತೆ ಇನ್ನೊಮ್ಮೆ ಕಣ್ಣೀರು ಸುರಿಸಿದ.

“ ಕಬೀರ ... ? ”

ಹುಸೇನ ಆತುರದಿಂದ ಕೇಳಿದ.

“ ಇದಾನೆ ಮಗೂ. ನಮ್ಮಲ್ಲಿ ಇದಾನೆ. ಹೊರಗೆ ಆಡಾಕ ಹೋಗಿರ್ಬೇಕು.”

ಎನ್ನುವಷ್ಟರಲ್ಲಿ ಕಬೀರ ಬಂದ. ಅದೇ ರೂಪ – ತಾಯಿಯನ್ನು ಹೋಲುತಿದಾನೆ. ಹುಡುಗ ಬೆಳೆದಿದಾನೆ. ಆದರೆ ಆ ಕಾಂತಿ, ಆ ಕಳೆ ಹೊಳಪು ಇಲ್ಲ. –ಆದರೂ ಬೆಳೆದಾನೆ. ಸಂತೋಷ.

ಹುಸೇನ್ ಮಗನನ್ನು ಅಪ್ಪಿ ಮುದ್ದಾಡಿದ ತಾರಾ ಬಗ್ಗೆ ಅವನಲ್ಲಿ ಹೆಮ್ಮೆ ಜತೆಗೆ ಇನ್ನೊಂದು ಪ್ರಶ್ನೆ ಕೇಳುವ ಕುತೂಹಲ.

" ಮಿಲ್ ಮಾಲಿಕ ? "

" ಅವಗೇನು ಧಾಡಿ ರೂಪ್ಯಾ ಹೊಳೆ ಹರಿಸಿ ' ಕಾಲುಜಾರಿ ಭಾವಿ ಬಿದ್ಲು ' ಅಂತ ಪಂಚನಾಮೆ ಮಾಡ್ಸಿದಾ. ಪಾಠಾದ

" ಓ ಹ ! ಈ ಅನ್ಯಾಯದ ಸೇಡು ಎಂದು ತೀರಿಸಿಕೊಂಡೇನು ! "

ಹುಸೇನ್ ಈಗಲೂ ಮಿಲ್ ಮಾಲೀಕರ್ ಮೇಲೆ ಹಲ್ಲು ಕಡೀತಾ ಇದಾನೆ ಆದರೆ ಹೊಟ್ಟೆಯಲ್ಲಿಯ ಸಿಟ್ಟು ಿಟ್ಟಿಯಲಿಲ್ಲ. ಏನು ಪ್ರಯೋಜನ ಹೇಳಿ ?

ದರಿದ್ರರ ಮೇಲೆ ಮಾಡಿದ ಶ್ರೀಮಂತರ ಅನ್ಯಾಯಕ್ಕೆ ತೀರ್ಪಿಲ್ಲ !

ಅಲ್ಲವೇ ?

---

# ನಂಜು



"ಈ ಸಾರಿ ಭಾಳ ಮಳಿ ಆತು. ನಮ್ಮ ಜ್ವಾಳದ ಬೆಳಿ ಏನಂತ ಹೇಳ್ಲಿ ! ಈ ವರ್ಷ ನಿನ್ಗೆ ಎಡ್ಡು ರಟಕವಿ ಸೀರಿ ತಂದ್ಕ ಬಿಡ್ತೀನಿ. ಈ ಬಡ್ಡಿ ಎಮ್ಮಿ ಮಾರಿ ಒಂದು ಚಲೋ ಹೈನದ ಎಮ್ಮಿ ತರೋನು, ಹಿರೀ ಹೋಳಿ ದಂಡ್ಯಾತಿಂದ್ರು"

ನಾಗಪ್ಪ ಆನಂದದಿಂದ ಹೇಳುತ್ತಿದ್ದ,

ಆಹ್ಲಾದ.

ಈ ಸಲ ಅವನ ಹೊಲದ ಜೋಳ ಹುಲುಸಾಗಿಯೇ ಬೆಳೆದಿತ್ತು. ಊರಲ್ಲಿ ಈ ಸಲ ನಾಗಪ್ಪನೇ ಹೆಚ್ಚು ರಾಶಿ ಒಕ್ಕುತ್ತಾನೆಂದು ಜನರು ಆಡಿಕೊಳುತಿದ್ದರು. ನಾಗಪ್ಪನಿಗೂ ಹೆಮ್ಮೆ. ತಾನು ಕಷ್ಟಪಟ್ಟು ಬೆವರು ಹರಿಸಿದು ಸಾರ್ಥಕವಾಯಿತೆಂದು ಸಂತೋಷ. ತನ್ನ ಬಡತನದ ಬವಣೆ ತಪ್ಪಿ, ಒಂದು ವರುಷದ ಮಟ್ಟಿಗಾದರೂ ನೆಮ್ಮದಿಯಾಗಿರಬಹುದೆಂದು ಸಮಾಧಾನ. ಅದನ್ನೇ ಹೆಂಡತಿಯೆದುರು ಹೆಮ್ಮೆಯಿಂದ ಹೇಳಿಕೊಳುತಿದ್ದಾನೆ.

ನಾಗಪ್ಪನ ದೃಷ್ಟಿ ಹಗ್ಗ ಹೊಸೆಯುವದರ ಮೇಲಿತ್ತು. ತನ್ನ ಹೇಳಿಕೆಗೆ ಹೆಂಡತಿಯಿಂದ ಯಾವ ಉತ್ತರವೂ ಬರಲಿಲ್ಲ. ಮೇಲೆ ನೋಡಿದ.

ನೀಲವ್ವ ಅಲ್ಲಿರಲಿಲ್ಲ.

"ಏಯ್ ......ಎಲ್ಲಿ ಹ್ವಾದೀ ?? ಬಾ ಇಲ್ಲಿ ನಾ ಏನ ಹೇಳ್ಲಾಕ ಹತ್ತಿನೂ ಅತ್ತ ಮನಸ ಇಲ್ಲ ಇಕೀದ ಏ...... ಬಂದೀನ ?? ?"

ನಾಗಪ್ಪ ಕೊಂಚ ಎತ್ತರದ ದನಿಯಲ್ಲಿ ಕರೆದ.

“ ಯಾಕ ಕರೀತಾನ ಇವಾ. ಹಂ. ಇಂದ ಸ್ವಾಮೂರ ಕೆಲ್ಸ ಇಲ್ದ ಕುಂತಾನ. ನಂಗೂ ಕುಂದ್ರ ಅಂತಾನ. ಯಾಕ ? ಯಾಕ ಕರದಿ ? ”

ನೀಲವ್ವ ಅಡುಗೆಯ ಮನೆಯಿಂದ ಗೊಣಗುತ್ತಲೇ ಹೊರಗೆ ಬಂದಳು– ಮುಸುರಿಗೈಯಿಂದ

“ ಬಾರ್ಲೆ ಇಲ್ಲಿ. ಕುಂದ್ರ ನಿಂಗೊಂದ ಸಂತೋಸ್ದ ಸುದ್ದಿ ಹೇಳತಿನಿ ಕುಂದ್ರ ಬಾ. ”

ನಾಗಪ್ಪ ಹಗ್ಗ ಹೊಸೆಯುವದನ್ನು ಬಿಟ್ಟು ಎಲೆ–ಅಡಿಕೆ ಚೀಲ ಬಿಚ್ಚಿದ.

“ ಇಂತಾದ ಏನವಾ ಹೇಳತಾನ ಇವಾ ! ”

ನೀಲವ್ವ ಬೆರಗಿನಿಂದ ಗಂಡನನ್ನು ನೋಡಿದಳು. ತುಟಿಯ ಮೇಲೆ ಬೆರಳಿಟ್ಟು

“ ಇಂದ ಅಗಸ್ಯಾಗ ಮಂದಿ ಏನ ಮಾತಾಡತಿದ್ರ ಅಂತಿ ? ಈ ವರ್ಷ ಊರಿಗೆಲ್ಲ ನಮ್ಮ ಬೆಳೀನ್ಲೆ ಮುಂದ. ‘ ಏನಹಾ ನಾಗಪ್ಪನ ಬೆಳಿ ! ’ ಅಂತಾರ ಈ ವರ್ಷ “ ಹೆಚ್ಚು ಬೆಳಿರಿ ” ಸರಕಾರದವ್ರು ಬಕ್ಸಿಸ ನಮಗ್ಲೆ ಸಿಗೋದ ಗಟ್ಟಿ ಅಂತ ! ”

ಉತ್ಸಾಹ ಹೆಮ್ಮೆಯಿಂದ ಹೇಳುತಿದ್ದ ನಾಗಪ್ಪ.

“ ಅವ್ನಲೆ ಹಿಂಗೇನ ? ಬಕ್ಸಿಸ್ ಅಂದ್ರ ಸರಕಾರದವ್ರ ಪಾಳೇ ಸೂಟ ಬಿಡತಾರಂತೇನ ? ”

ನೀಲವ್ವ ಬಗೆಹರಿಯುದ ವಿಸ್ಮಯದಿಂದ ಕೇಳಿದಳು ಮೂಗಿನ ಮೇಲೆ ಬೆರಳಿಟ್ಟು

“ ಛೀ ! ಹೊಗನಿನ ಹುಚ್ಚಿ ! ಬಕ್ಸಿಸ್ ಅಂದ್ರ ಸರಕಾರದವ್ರು ಯಾರ ಹೆಚ್ಚ ಬೆಳೀತಾರ ನೋಡ ಅವ್ರಿಗೆ ಹಣ ಕೊಡತಾರ ತಿಳೀತ್ಯ ? ”

“ ಹ್ಞಾಂ ! ಆ ದುಡ್ಡ ನಿನಗ ಬಿಡ ಹಂಗಾರ ! ”

“ ನಮ್ಮ ಹೊಲದ ಹಂತೇಲಿದು ಆ ದೇಸಾಯ್ರ ಹೊಲಾ– ಅದನೂ ಪಾಳೇಕ ಹಿಡೀತೆನಿ ”

ನಾಗಪ್ಪ ನಿಃಸಂಶಯ [illegible] ದ ಎಲೆ ಅಡಿಕೆ ಉಗುಳುತ್ತ ಹೇಳಿದ.

ಗಂಡ ಹೆಂಡರಿಬ್ಬರೂ ಆನಂದ ಸಾಗರದಲ್ಲಿ ತೇಲಾಡಿದರು. ಅನೇಕ ದಿನಗಳಿಂದ ಸಹಿಸುತ್ತ ಬಂದ ಕಷ್ಟ ಇನ್ನು ಕೆಲವೇ ದಿನಗಳಲ್ಲಿ ಕಳೆಯುವುವಲ್ಲ! ಎಂದು ಹಿಗ್ಗಿದರು.

ನಾಗಪ್ಪನದು ಒಂದು ಸಂಸಾರ. ಹೊಳೆಯ ಬದುವಿನಲ್ಲಿ ಎರಡು ಎಕರೆ ಜಮೀನು, ಊರಲ್ಲಿ ಒಂದು ಚಿಕ್ಕ ಮಣ್ಣಿನ ಮನೆ, ಎರಡು ಎತ್ತು, ಒಂದು ಎಮ್ಮೆ—ಈಗದು ಹಾಲು ಕೊಡುತ್ತಿಲ್ಲ—ಇವಿಷ್ಟು ನಾಗಪ್ಪನ ಆಸ್ತಿ. ಅವನ ಹೊಟ್ಟೆ ಬಟ್ಟೆಗೆ ಸಾಲುವಷ್ಟಿದ್ದರೂ ನಲವತ್ತೆರಡರಿಂದ ಇತ್ತೀಚೆಗೆ ಬಿದ್ದ ಬರಗಾಲಗಳಿಂದ ಸರಕಾರದ 'ಲೇವಿ', ಅಧಿಕ ಮಗ್ಗಟ್ಟು, ಯುದ್ಧದ ಕಾಲ ಇವುಗಳಿಲ್ಲದರಿಂದ ನಾಗಪ್ಪನ ಆರ್ಥಿಕ ಸ್ಥಿತಿ ಕುಸಿದು ಬಿದ್ದಿತ್ತು. ನಿತ್ಯ ದುಡಿಮೆ. ಅದೇ ಆಹಾರದ ಆಧಾರ. ನೀಲಮ್ಮನೂ ಪ್ರಪಂಚದ ಪರಿಚಯವಿದ್ದವಳು. ನಿರಕ್ಷರತೆಯಾದರೂ ನಿತ್ಯ ಜೀವನದಲ್ಲಿ ಬೇಕಾಗುವಷ್ಟು ಜ್ಞಾನ ಅವಳಿಗಿದೆ. ಗಂಡ ಹೆಂಡಿರಿಬ್ಬರೂ ಅನ್ಯೋನ್ಯವಾಗಿ ಸಂಸಾರ ಸಾಗಿಸಿಕೊಂಡು ಬಂದಿದ್ದಾರೆ. ಹೊಲದ ತೆರಿಗೆ ತುಂಬಿದ ಪಾವತಿ ಮತ್ತೇನಾದರೂ ಕಾಗದಗಳಿದ್ದರೆ ಊರಿಗೇ 'ತಿಳಿದವರು' ಎನಿಸಿದ ಶಾಮರಾಯರಿದ್ದಾರೆ.

ಸರಿ. ಇದಕ್ಕೂ ಹೆಚ್ಚಾದ ಯಾವ ಅವಶ್ಯಕತೆಯೂ ಅವರಿಗಿಲ್ಲ. ಹೊಲದಲ್ಲಿ ಬೆಳದ ಅಡಗಾಳು ಮಾರಿ ವರುಷದ ಮೇಲು ಖರ್ಚು ಸಾಗಿಸುತ್ತಾರೆ. ಒಂದು ವರುಷದ ಮೂರು ನೂರಾ ಅರವತ್ತು ದಿನ ಕಳೆದು ಹೊಸ 'ಉಗಾದಿ' ಕಾಣ ಬೇಕಾದರೆ ನಾಗಪ್ಪನಿಗೆ ಸಾಕಾಗುತ್ತಿತ್ತು. ದೇಹ ಒಂಗು ಗಟ್ಟಿಯಾದ ಬಟ್ಟೆಯೂ ಕಾಣುತ್ತಿರಲಿಲ್ಲ.

ಈ ಸಲ ಕೊರತೆಗಳನೆಲ್ಲ ನೀಗಿಸಿಕೊಂಡು ಒಂದು ವರುಷ ನೆಮ್ಮದಿಯಾಗಿ ಬಾಳ ಬಹುದೆಂದು ನಾಗಪ್ಪ ಹಿಗ್ಗುತ್ತಿದ್ದ. ತನ್ನ ಹೃದಯದ ಹಿಗ್ಗಿನ ಹೊಳೆ ಹೆಂಡತಿಯ ಹೃದಯದಲ್ಲಿಯೂ ಹರಿಯಿಸಿದ್ದ.

ಗಂಡ ಹೆಂಡರಿಬ್ಬರೂ ಸಂತೋಷ ಸಾಗರದಲ್ಲಿ ತೇಲಾಡುತ್ತಿದ್ದರು

“ನಾಗಪ್ಪ ಗೌಡ್ರ ಕರೀತಾರ ನೋಡ್ರಿ”

ಗೌಡರ ಆಳು ಕೆಂಚ ಬಂದು ಹೇಳಿದ

" ಯಾಕ ಅಂತಪಾ ಕೆಂಚ ? "

" ನನ್ಗೇನ ಗೊತ್ತು ? ಅವ್ರು ಹೇಳಿದಟ ಕೇಳೋದ ನನ್ನ ಕೆಲ್ಸ "

" ತಂಬಾಕ ತಿಂತೀಯೇನ ತಿನ್ನು '

" ಇೀಗ ಸಡವ ಇಲ್ಲ ದನಾ ಉಸ್ವಾಸ ಕಟ್ಯಾವ. ನೀ ಗಡಾನ ಬಾ "

ಎಂದು ಹೇಳಿ ಕೆಂಚ ಹೊರಟು ಹೋದ

" ಹ್ಞಂ "

ಎಂದು ನಾಗಪ್ಪ ತಿರಸ್ಕಾರದ ದನಿ ತೂರಿ ಹೆಂಡತಿಯ ಕಡೆಗೆ ನೋಡಿದ ಅವಳು ಆಗಲೇ ಒಳಗೆ ಹೋಗಿದ್ದಳು.

ನಾಗಪ್ಪನ ಹೃದಯಲ್ಲಿ ಹರಿದಾಡುತಿದ್ದ ಹಾಲುಗಡಲಿನ ಹುಮ್ಮಸ್ಸಿನ ವರ್ಷಾವ ಮಾದಂತಾಯಿತು. ಗೌಡನ ಕಠೋರ ಮೂರ್ತಿ ಅವನ ಕಣ್ಣೆದುರಿಗೆ ಬಂದು ನಿಂತಿತು. ಮುಖ ಗಂಭೀರವಾಯಿತು. ಅವನ ಸುಖ ಸಂಸಾರದಲ್ಲಿ ಗೌಡರೊಬ್ಬರು ಕಾಲ ಪುರುಷನಂತಾಗಿದ್ದರು. ಯಾರ ಹಂಗಿನಲ್ಲಿಯೂ ನಾಗಪ್ಪ ಇರಲಿಲ್ಲ ಆದರೂ ಅವನು ಗೌಡರಿಗೆ ಹೆದರುತಿದ್ದ. ಗೌಡರ ಹೊಲ ನಾಗಪ್ಪನ ಹೊಲಕ್ಕೆ ಹೊಂದಿಕೊಂಡೇ ಇತ್ತು

ನಾಗಪ್ಪ ಹೆದರಿದಂತೆ ಊರ ಜನರೂ ಗೌಡರ ಉಗ್ರ ಮೂರ್ತಿಗೆ ಹೆದರುತಿದ್ದರು ಬಡ ಜನರ– ಅಸಹಾಯಕರ ಸುಲಿಗೆ ಗೌಡರ ವ್ಯವಸಾಯ. ಗೌಡ ಮಹಾ ಸ್ವಾರ್ಥಿ ಮಹಾ ಕ್ರೂರಿ ಇದರಂತೆ ಮಹಾ ಕಾಮುಕನೂ ತನ್ನ ಅಧಿಕಾರದ ದರ್ಪ ಊರ ಜನರಮೇಲೆ ಬೀರಿ ತನ್ನ ಸಿರಿವಂತಿಗೆ ವರ್ಚಸ್ಸು ಕಾಯ್ದುಕೊಂಡು ಬಂದಿದ್ದ. ಎಲ್ಲರೂ ಗೌಡರ ನೆರಳಿಗೆ ಹೆದರುವವರೇ

ಈ ಸಲದ ನಾಗಪ್ಪನ ಹೊಲದ ಬೆಳೆ ಕಂಡು ಗೌಡ ಸಹಿಸಲಾರದ ಅಸೂಯೆ ಪಡುತಿದ್ದ ಹೊಲದ ಸೀಮೆಯ ಬಗ್ಗೆ ನಾಗಪ್ಪನೊಡನೆ ಆಗಾಗ ನ್ಯಾಯವಾಡಿ ಒಂದು ನಾಲ್ಕನೆಯ ಅಂಶದಷ್ಟು ಹೊಲವನ್ನೇ ಆಕ್ರಮಿಸಿದ್ದ. ತನ್ನ ಅಸಹಾಯತೆ, ಗೌಡರ ವರ್ಚಸ್ಸು ನೆನೆದು ನಾಗಪ್ಪ ಸುಮ್ಮನಾಗಿದ್ದ

ಆದರೆ ಈಗ ಮಾತ್ರ ನಾಗಪ್ಪನ ಸಹನೆ ಹದ್ದು ಮೀರಿತ್ತು. ತನ್ನ ಬೆಳೆ ಕಂಡು ಗೌಡ ಅಸೂಯೆ ಪಡುತಿದ್ದಾನೆ– ಪಡಲಿ ಅದರಿಂದ ತನಗೇನು ?

" ನಾಗಪ್ಪ, ನಿನ್ನ ಬೆಳಿ ಕಂಡ ಗೌಡ ಹೊಟ್ಟಿಕಿಚ್ಚ ಪಡತಾನ "

ಎಂದು ನಾಗಪ್ಪನ ಗೆಳೆಯ ಮೊದಲೇ ಎಚ್ಚರಿಸಿದ್ದ. ನಾಗಪ್ಪ ಅದನ್ನು ಅಲಕ್ಷದಿಂದಲೇ ಕಂಡಿದ್ದ ಈಗ ಮಾತ್ರ ಅವನಿಗೆ ಸಮಾಧಾನವಿರಲಿಲ್ಲ ಗೌಡರ ಮನೆಗೆ ಹೋಗಲೇ ಬಾರದೆಂದು ಅವನು ನಿರ್ಧರಿಸಿದ. ಗೌಡರ ಸ್ವಭಾವ ನೆನೆದು ಹೋಗದಿದ್ದರೆ ಹೊಸ ವಿಘ್ನ ಉಂಟಾಗಬಾರದು, ಹೋಗಿ ಬಂದರಾದೀತು ಎಂದು ಎಲೆ–ಅಡಿಕೆ ಚೀಲ ಸುತ್ತಿಕೊಳುತ ಎದ್ದ

" ನಾ ಆಟ ಗೌಡ್ರ ಮನಿತನಾ ಹೋಗಿ ಬರ್ತೀನಿ "

ಎಂದು ಹೆಂಡತಿಗೆ ಕೂಗಿ ಹೇಳಿದ

" ಅಡೀಗಿ ಆಗೇತಿ ಅಽಟ ಬಿಸೀದ ಉಂಡ ಹೋಗಲಾ "

ಎಂದು ನೀಲಮ್ಮ ಹೇಳಿದರೂ ಗೌಡರ ಹೊರೆ ಎದೆ ಮೇಲೆ ಇಟ್ಟು ಕೊಂಡು ಊಟ ರುಚಿಸಲಾರದೆಂದು ನಾಗಪ್ಪ ಹೊರಟೇ ಬಿಟ್ಟ.

ಪಡಸಾಲೆಯಲ್ಲಿ ಗೌಡರ ಉಗ್ರ ಮೂರ್ತಿ ರುದ್ರ ರೂಪ ತಾಳಿ ಕುಳಿತಿತ್ತು. ನಾಗಪ್ಪನನ್ನು ನೋಡುತ್ತಲೇ ಅದು ಇನ್ನಷ್ಟು ಉಗ್ರವಾಯಿತು.

" ಏನೋ ನಾಗಪ್ಪ, ನಮ್ಮ ಹೊಲಾ ಉಳಸಬೇಕ ಅಂತಿಯೋ ಎಲ್ಲಾ ನಿಂದ ಮಾಡಿಕೋಬೇಕ ಅಂತಿಯೊ ಹೇಳಿ ಬಿಡು. ಮ್ಯಾಗ ಮ್ಯಾಗ ಕಟಕಟಿ ಬ್ಯಾಡ "

" ನಾ ಏನೂ ತಪ್ಪ ಮಾಡಿಲ್ಲ ದೇವ್ರೂ, ಸರಕಲ್ಲದವ್ರು ಅಳತಿ ಮಾಡಿ ಕೊಟ್ಟ ಸೀಮೀ ವಳಗಽ ಒಂದ ವಾರ ಇದೀನ್ರಿ "

" ಹುಂ ! ಮತ್ತ ಸಂಬಾವಿತ ಆಗಾಕ ಹೋಗ್ತಾನ ಭಡವಾ. ನೀನರೆ ಏನ ಮಾಡಿ. ಈ ವರ್ಸ ಹೊಲಾ ಅಽಟ ಭೇಶ್ ಬೆಳದೈತಿ, ಇಷ್ಟ ಜಿಗ್ಗಾಡಾಕ ಹತ್ತಿದಿ "

ತನ್ನ ಹೊಟ್ಟೆಯಲ್ಲಿಯ ಅಸೂಯೆಯ ನಂಜನೆಲ್ಲ ನಾಗಪ್ಪನ ಮೇಲೆ ಕಾರಿದ, ಗೌಡ. ನಾಗಪ್ಪನಿಗೆ ಇದರಿಂದೇನೂ ಅಚ್ಚರಿಯಿಲ್ಲ. ಸಿಟ್ಟು ಬಂದಿತ್ತು.

ಆದರೆ ಪ್ರಯೋಜನವಿಲ್ಲ  ತನ್ನ ನಿರಪರಾಧಿತ್ವ ಗೌಡನೆದುರು ತೋಡಿಕೊಂಡ ಗೌಡ ಇನ್ನಷ್ಟು ಉರಿದು ಬಿದ್ದ. ಏನೇನೋ ಆಡಿದ

ಗೌಡ ಮಾತನಾಡಿದ ಒಂದೊಂದು ಮಾತೂ ನಾಗಪ್ಪನ ಹೃದಯದಲ್ಲಿ ತೀರದಂತೆ ನೆಟ್ಟಿದವು  ಕೆಳಗೆ ಮುಖ ಹಾಕಿ ಮನೆಗೆ ಮರಳಿದ.

ಗೌಡರ ಅನ್ಯಾಯ ನಾಗಪ್ಪನ ಮನಶಾಂತಿಯನ್ನು ಕದಡಿತು. ಅದು ಶ್ರೀಮಂತರ ನ್ಯಾಯ. ಅವರು ಹಣವಿದ್ದವರು ನ್ಯಾಯ ಕೊಳ್ಳುತ್ತಾರೆ. ನಾನು ಬಡವ. ನ್ಯಾಯ ಕೊಂಡುಕೊಳುವಷ್ಟು ಹಣ ನನ್ನಲಿಲ್ಲ  ನಾಲ್ಕೈದು ವರುಷಗಳಿಂದ ಗೌಡರೇ 'ಹೆಚ್ಚು ಬೆಳೆ' ಪಾರಿತೋಷಕ ಪಡೆಯುತ ಬಂದಿದ್ದರು ಹಣ ಬಲದ ಮೇಲೆ.

ಈಗ?

ನಾಗಪ್ಪ ಬೆಚ್ಚಿದ. ಗೌಡ ನೀಚ. ಹತ್ತಾರು ಸಂಸಾರ ಹಾಳುಮಾಡಿ, ನೂರಾರು ಸ್ತ್ರೀಯರ ಮಾನ ಭಂಗ ಮಾಡಿ ತೀರಾ ಕೊಬ್ಬಿದಾನೆ. ಅವನ ರೋಷಕ್ಕೆ ನಾನು ತಡೆಯಬಹುದೆ?

ಇದನ್ನೇ ನನೆಯುತ್ತ ನಾಗಪ್ಪ ಮನೆ ಸೇರಿದ

ನೀಲಮ್ಮ ಗಂಡನನ್ನೇ ಇದಿರು ಕಾಯುತಿದ್ದಳು. ಅವನನ್ನು ನೋಡುತ್ತಲೇ ಆನಂದದಿಂದ ಕೇಳಿದಳು–

" ಯಾಕ ಇಷ್ಟ ತಡಾ ಮಾಡ್ದಿ? ಬಕ್ಸಿಸ್ ರೂಪಾಯಿ ಸಿಕ್ತು ಏನ ಇಷ್ಟ ಗಡಾನ? "

ನಾಗಪ್ಪ ಏನೂ ಮಾತನಾಡಲಿಲ್ಲ. ನೀಲವ್ವ ಬಿಸಿ ಬೂದಿಯಲ್ಲಿ ಬೇಯಿಸಿದ ಗೆಣಸು, ಮುದ್ದೆ ತಿಂದು ನೀರು ಕುಡಿದ.

ನಾಗಪ್ಪನ ಈ ಮೌನ ತುಂಬಿದ ನಿರುತ್ಸಾಹ ಕಂಡು ನೀಲವ್ವನಲ್ಲಿಯ ಉತ್ಸಾಹವೂ ಉಡುಗಿ ಹೋಯಿತು. ಒಂದು ತಾಸಿನ ಹಿಂದೆ ಹಿಗ್ಗಿನ ಹೊಳೆ ಹರಿದಾಡುತಿದ್ದ ಮನೆಯಲ್ಲಿ ಮರುಭೂಮಿ ಹರಡಿಕೊಂಡಿತು.

ಸಂತೋಷ–ಅಸಂತೋಷ, ಉತ್ಸಾಹ–ನಿರುತ್ಸಾಹ! ಎಷ್ಟು ಅಂತರ ಆದರೆ ಎಷ್ಟು ಹತ್ತಿರ!

ಗಂಡ ಹೆಂಡರಿಬ್ಬರೂ ಕುಳಿತಲ್ಲಿಯೇ ಒರಗಿ ನಿದ್ರೆ ಹೋಗಿದ್ದರು. ಒಲೆಯ ಮೇಲೆ ನುಚ್ಚು ತಣ್ಣಗಾಗಿತ್ತು.

ಮರುದಿನ ನಸುಕು ಹರಿಯುವ ಮೊದಲು ನಾಗಪ್ಪ ಕವಣೆ ಹಿಡಿದು ಹೊಲದ ಕಡೆಗೆ ಹೊರಟ. ದೂರದಿಂದ ತನ್ನ ಹೊಲ ನೋಡುತ್ತಿರುವಂತೆ ಅವನ ಕಣ್ಣು ಕತ್ತಲು ಕವಿಯಲಾರಂಭಿಸಿತು. ಸಾವಿರಾರು ವರುಷಗಳಿಂದ ಕೂಡು ಹಾಕಿದ ಜಿಪುಣನ ಅಪಾರ ಹಣವನ್ನು ತನ್ನ ಕಣ್ಣೆದುರಿಗೇ ಕಳ್ಳರು ದೋಚಿಕೊಂಡು ಹೊರಟಾಗ ಆಗುವ ವ್ಯಥೆ ನಾಗಪ್ಪನಿಗಾಗತೊಡಗಿತ್ತು. ಕಾಲು ಹೊಲದ ಕಡೆಗೆ ಓಡತೊಡಗಿದ್ದವು.

— ಅಹುದು.

— ಸತ್ಯ.

— ಅದೆ – ಅದೆ !

“ ಅಯ್ಯೋ ! ನನ್ನ ಬದುಕು ಹಾಳು ಮಾಡಿದ ! ”

ಎಂದಿಷ್ಟೇ ಅವನ ಮುಖದಿಂದ ಹೊರಟ ಶಬ್ದ.

ನಾಗಪ್ಪನ ಆರ್ತ ಕೂಗಿಗೆ ನೆರೆ ಹೊಲದವರು ಧಾವಿಸಿ ಬಂದರು. ಬಂದವರಲ್ಲಿ ಗೌಡರೂ ಒಬ್ಬರಾಗಿದ್ದರು.

ನಾಗಪ್ಪನಿಗೆ ಪ್ರಜ್ಞೆ ತಿಳಿದಾಗ ಅವನ ದುಃಖದಲ್ಲಿ ನೀಲವ್ವನೂ ಭಾಗಿಯಾಗಿದ್ದಳು.

ದುಃಖದ ಆವೇಗ ನಿಧಾನವಾಗಿ ಇಳಿಯತೊಡಗಿದಂತೆ ನಾಗಪ್ಪನಲ್ಲಿ ಸೇಡಿನ ಭಾವನೆ ಬೆಳೆಯ ತೊಡಗಿತು. ತನ್ನ ಅರ್ಧ ಬೆಳೆಯನ್ನು ಹಾಳು ಮಾಡಿದ ಗೌಡನಿಗೆ ಹಾಗೆಯೇ ಬಿಡಬಾರದೆಂದು ನಿರ್ಧರಿಸಿದ.

“ ಗೌಡಾ ನನ್ನ ಬೆಳೀ ಕೋಸ್ದಿ. ನಾ ಏನ ಇಷ್ಟಕ್ಕ ಸುಮ್ಮಿರಾಕಿಲ್ಲ ”

ಎಂದು ಹಲ್ಲು ಕಡಿದ. ಹಾಗೆ ಬಹಿರಂಗವಾಗಿ ಗೌಡರಿಗೆ ಎದುರು ಹೇಳಿದವನು ಆ ಊರಿನ ಇತಿಹಾಸದಲ್ಲಿ ಅವನೇ ಮೊದಲು.

ಮರುದಿನ ನಾಗಪ್ಪ ಅಡಕಲು ಸಾಲಿನಲ್ಲಿಟ್ಟಿದ್ದ ನಾಲ್ಕು ಬಿಳಿ ನಾಣ್ಯಗಳನ್ನು ತನ್ನ ಧೋತರದ ಅಂಚಿನಲ್ಲಿ ಬಿಗಿಯಾಗಿ ಕಟ್ಟಿಕೊಂಡು ಗೋಕಾವಿಗೆ ಬಸ್ಸು ಏರಿದ. ಪೋಲೀಸು ಠಾಣೆಯಲ್ಲಿ ದೂರು ಕೊಟ್ಟ. ಗೌಡನ ಸೇಡು ತೀರಿಸಿ ಕೊಳ್ಳಬೇಕೆಂದು ಒಳ್ಳೆಯ ವಕೀಲರನ್ನು ನಿಯಮಿಸಿ ತಂದ ಕಾಸನ್ನೆಲ್ಲ ಅವರಿಗರ್ಪಿಸಿ, ಗೌಡನಿಂದ ಪರಿಹಾರ ಪಡೆಯುವದಷ್ಟೇ ಅಲ್ಲ ಅವನನ್ನು ಸೆರೆಮನೆಗೆ ಕಳಿಸುವ ಆಶ್ವಾಸನವನ್ನೂ ಪಡೆದು ಹೆಮ್ಮೆಯಿಂದ ಊರಕಡೆಗೆ ನಡೆದ – ಕಾಲು ನಡಿಗೆಯಿಂದ.

ಪೋಲೀಸರು ಬಂದರು. ಯಥಾವಿಧಿಯಂತೆ ' ಪಂಚನಾಮೆ ' ಶಾಸ್ತ್ರವಾಯಿತು. ಕಟ್ಲಿ ನಾಗಪ್ಪನಂತೆ ಮಾಡಿಕೊಡಿಸುವದಾಗಿ ಹೇಳಿ ಅವನಿಂದ ಬಂದಷ್ಟು ಕಾಸು ಸುಲಿದರು. ನಾಲ್ಕು ದಿನ ಗೌಡರ ದಿವಾಣಖಾನೆ ಪೋಲೀಸರ ' ವಿಲಾಸ ಮಂದಿರ ' ವಾಯಿತು

ಕಟ್ಲಿಯ ತೀರ್ಪು ಹೊರಬಿದ್ದಿತು.

" ಗೌಡರು ನಿರ್ದೋಷಿ. ಮೊದಲ ಬಹುಮಾನ ಅವರಿಗೇ "

ಇದ್ದ ಕಾಸು ಕೈ ಬಿಟ್ಟಿತು. ಬರುವ ಆದಾಯ ತಪ್ಪಿ ಹೋಯಿತು.

ಗಂಡ ಹೆಂಡರಿಬ್ಬರೂ ಹಗಲಿರುಳೆನ್ನದೆ ದುಡಿಯುತ್ತಿದ್ದಾರೆ.

ಬಾಳಿನ ನಂಜೇ ಅವರಿಗೆ ಆಹಾರ – ಗೌಡಕಾರಿದ ನಂಜು.

---

# ಅಶ್ರು



ಅಶ್ರು.

ನೀಲ ಗಗನದಲ್ಲಿ – ಅಶ್ರು.

ನೀಲ ಗಗನದಲ್ಲಿ ದಿವ್ಯ ಆತ್ಮವೊಂದು ಅಶ್ರು ಸುರಿಸುತ್ತಿತ್ತು–ಅಶ್ರು

ಭಾರತದ ನೂತನ ಬ್ರಹ್ಮ ಅವನ ಆತ್ಮ ಕಣ್ಣೀರಿಡುತಿತ್ತು ಅಂದು. ತನ್ನ ಅನುಯಾಯಿಗಳು – ಯಾರು ಅಹಿಂಸೆಯ ಮಂತ್ರ ಪಠಿಸಿದ್ದರೋ ಅವರು—ತನ್ನ ಶಿಷ್ಯರು ಕೈಯಲ್ಲಿ ಕೊಳ್ಳಿ ಹಿಡಿದಿದಾರೆ–ಕೊಳ್ಳಿ! ಎಂತಹ ಅನ್ಯಾಯ! ಅವನ ಆತ್ಮ ತಳಮಳಿಸುತಿದೆ.

ಅಶ್ರು ತುಂಬಿದ ಕಣ್ಣು ಕೆಳಗೆ ನೋಡಿದವು ಅವತಾರ ಪುರುಷನ ಹೃದಯ ಬಿರಿಯಿತು. ನೋಡಲಾರದೆ ಕಣ್ಣು ಮುಚ್ಚಿದ. ಅದೇ ದೃಶ್ಯ–ಅದೆ.

“ ಅಹಿಂಸಾ ಪರಮೋ ಧರ್ಮಃ ”

ಎಂದು ಆಕಾಶದಲ್ಲಿ ಪ್ರತಿಧ್ವನಿಸುವಂತೆ ಕೂಗಿದವರೇ ಇಂದು ಈ ಪಶುಹಿಂಸೆಯ ಕಣಕ್ಕಿಳಿದಿದಾರೆ. ಅಯ್ಯೋ! ನಾನಿದನು ಹೇಗೆ ಸೈರಿಸಲಿ! ಧನಗಾಗಿ ಈ ಹೊಡೆದಾಟ ಈ ಕೊಲೆ – ಇದು ನನ್ನ ಕೊಲೆ! ಅವರು ಅರಿಯಲಾರರೆ!

ಮುಚ್ಚಿದ ಕಣ್ಣು ತಾನಾಗಿಯೇ ತೆರೆಯಿತು.

ಚಿಕ್ಕದಾದ ಒಂದು ಮನೆ. ಪಡಸಾಲೆಯಲ್ಲಿ ಒಂದು ಮೇಜು ಎರಡು ಕುರ್ಚಿ ಒಂದು ವಿರಾಮಾಸನ. ತರುಣನೊಬ್ಬ ವಿರಾಮಾಸನದ ಮೇಲೆ ಕುಳಿತಿದಾನೆ– ಸುರೇಶ್ ಅವನ ಹೆಂಡತಿ ಸರೋಜಾ, ಇಬ್ಬರೂ ದುಃಖಿತರಿದಾರೆ. ಕೈಕಾಲಿಗೆರಗಿ ಯಾಚಿಸುತಿದಾರೆ ಜೀವದಾನ! ಒಂದು ವರುಷದ ಮಗು,

ಏನೂ ಅರಿಯದ ತಾಯಿ ತಂದೆಗಳ ದುಃಖ ಕಂಡು ಗಾಬರಿಯಿಂದ ಚೀರಿ ಕೊಳುತಿದೆ.

ಮನೆಯೇ ಶೋಕ ಸಾಗರದ ಮಹಾ ಪ್ರಳಯದಲ್ಲಿ ಕೊಚ್ಚಿ ಹೊರಟಿದೆ. ಕೈಯಲ್ಲಿ ಕೊಳ್ಳಿ ಹಿಡಿದ ಹತ್ತಾರು ಜನ 'ಶುಭ್ರ' ಧಾರಿಗಳು ಈ ಶೋಕ ಸಾಗರದ ಮಹಾ ಪ್ರಳಯದಲ್ಲಿಯೂ ತಮ್ಮ ಹೃದಯವನ್ನು ಬಂಡೆಗಲ್ಲುಗಳನ್ನಾಗಿ ಮಾಡಿಕೊಂಡು ಕರಗದೆ ಕದಲದೆ ರುದ್ರರೂಪ ತಾಳಿ ನಿಂತಿದಾರೆ ಸುರೇಶ್ ಸರೋಜ ಇಬ್ಬರೂ ಅವರ ಕಾಲು ಹಿಡಿದು ಪ್ರಾರ್ಥಿಸತೊಡಗಿದಾರೆ.

ಎಂತಹ ದೃಶ್ಯ! ನೋಡಿದವರ ಕರುಣೆಯು ಕಟ್ಟೆಯೊಡೆಯದಿರಲಾರದು

" ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇವೆ. ನಾವು ನಿರಪರಾಧಿಗಳು. ನಮಗೆ ಹಿಂಸಿಸ ಬೇಡಿ. ನೀವು ನಮ್ಮ ದೇವರು ನಮ್ಮನ್ನು ಉಳಿಸಿಕೊಡಿ ."

" ನಿಮ್ಮನ್ನ ಇಂದ ಜೀವದಿಂದ ಬಿಡೂಹಂಗಿಲ್ಲ ... ಮಹಾತ್ಮರ ಪ್ರಾಣಾ ನುಂಗಿದ ನಿಮ್ಮ ಜಾತೀನ್ನ ಸುಟ್ಟ ಬಿಡ್ತೀವಿ ನೀಚ ! ನಿಮ್ಮ ಜಾತಿ ನಮ್ಮ ದೇಶದಾಗ ಇರಬಾರ್ದು "

ಮುಖಂಡ ವೀರಾವೇಶದಿಂದ ಹೇಳುತಿದ್ದ.

" ನಿನ್ನ ಬಿಡೋದ್ನ ಇಲ್ಲ ನಮ್ಮ ಹಿರ್ಯಾರ ಕಾಲದಿಂದ ಮಾಡಿಕೋತ ಬಂದ ಹೊಲಾ ಬಿಡಿಸಿದಿ ಅದರ ಸೇಡಾ ತೀರಿಸಿಕೊಳ್ದ ಬಿಡ್ತಿನಂತ ತಿಳಿದೀದೇನ ? ನಿನ್ನ ಸುಟ್ಟ ಬಿಡ್ತೀನಿ "

ಟೊಪ್ಪಿಗೆ ಹಿಂದೆ ಮುಂದೆ ಸರಿಸಿ ಕೈಯಲ್ಲಿಯ ಡೊಣ್ಣೆ ನೆಲಕಪ್ಪಳಿಸುತ್ತ ಹೇಳಿದ ಆತ

" ಅಲ್ಲೋ ಕಚೇರ್ಯಾಗ ಕಾರಕೂನ ಇದೀನಿ ಅಂತ ನಿನಗೊಳೇ ಪಡವೀನ್ನ ಬಂದಾಂಗ ಆತೇನ ? ಮಿನಿಸ್ಟರ ಅಂತಾ ತಿಳಕೊಂಡಾನ ಮಗಾ. ನಂದಟ ಆ ಹೊಲದ ಉತಾರ ಲಗೂನ ಮಂಜೂರ ಮಾಡ್ಸಪಾ ನಿನಗ ಹತ್ತಿಪ್ಪತ್ತು ರೂಪ್ಯಾ 'ನಜರಾಣಿ' ಕೊಡ್ತೀನಿ ಅಂದ್ರ ಸಿಕ್ಯಾಂಗ ಮಾತಾಡ್ದಿ 'ನಾ ಲಂಚಾ ತಗೋಳಾವ ಅಲ್ಲ' ಅಂತ ನನಗ ಬೆದರಿಸ್ದಿ. ಯಾವಾಗ ಇದರ ಸೇಡಾ ತೀರಿಸಿಕೊಂತೀನೊ ಅಂತ ಒಳಗಿಂದೊಳಗ ಹಲ್ಲ ಕಡೀತಿದ್ನಿ. ನಿಮ್ಮ ಮಂದ್ಯಾವ್ನ ಕೊಂದ ಪಾಡ ಮಾಡ್ದ ನೋಡ "

ಜಾಕೀಟಿನಲ್ಲಿ ಮುಷ್ಟಿಬಿಗಿಯುತ್ತ ಇನ್ನೊಬ್ಬ ಹೇಳಿದ

" .. .. ಸಿದ್ದಪ್ಪ . ವೆಂಕಣ್ಣ .. ನಿಮ್ಮ ಕಾಲ ಬೀಳ್ತೀನ್ರಿ . .. ನಾನು ನಿರಪರಾಧಿ ನನ್ನ ಬಿಟ್ಟುಬಿಡಿ. ನಿಮಗೆ ಪುಣ್ಯ ಬರುತ್ತದೆ. ಸಾಯೋವರೆಗೆ ನಿಮ್ಮ ಹೆಸರು ಹೇಳಿ ಬದಕ್ತೀನಿ

ಹೃದಯದ ಕರುಳೆ ಕರಗುವಂತಿತ್ತು. ಆ ದೃಶ್ಯ—ಹೃದಯವಿದ್ದವರಿಗೆ.

" ಯಾಕ ನಿಂತ್ರ್ಯೋ . ? ಹಚ್ಚಿರಲಾ ಬೆಂಕಿ ! "

ಮುಖಂಡ ಆಜ್ಞಾಪಿಸಿದ.

ನೀವು ನನ್ನ ತಂದೆ ತಾಯಿ. ನನ್ನ ಮಾಂಗಲ್ಯ ಉಳಸ್ರಿ. ಅಯ್ಯೋ ! ! ಈ ಹಸುಗೂಸು. ಏನೂ ಅರಿಯದ ಮಗೂ ! ನಿಮ್ಗೂ ಮಕ್ಕಳಿರಬೇಕು. ಇದೂ ನಿಮ್ಮದೆಂದು ತಿಳೀರಿ. ಉಳಸ್ರಿ .. .. ... ನಿಮಗೆ ಸೆರಗೊಡ್ಡಿ ಬೇಡುತೇನೆ..... ... "

ಸರೋಜ ಮೂರ್ಛೆಗೊಂಡು ಅವರ ಪಾದದ ಮೇಲೆ ಬಿದ್ದಳು

" ....ಹ್ಞಂ .. ! .. ಹ್ಞಂ ! ! . ಹ್ಞಂ ಹ್ಞಾಂ ! ! ! ... ಪಾದದ ಮ್ಯಾಲೆ ಬೀಳ್ತ್ತ ಇದಾಳೆ ಹುಚ್ಚ ರಂಡೆ ! ಎಷ್ಟು ಚೆಂದ ಇದಿಯೇ ! . ನಿಲ್ಲು ನಿನ್ನ ಆಮ್ಯಾಲ ಸುಡ್ತೀನಿ ... ... "

ಮುಖಂಡ ಅವಳನ್ನು ಒಳಗಿನ ಕೋಣೆಗೆ ಸಾಗಿಸಿದ.

" ಅಯ್ಯೋ .. ! ಅಯ್ಯೋ ! ! ಅಯ್ಯೋ ! ! ! ಹ್ಞಾಂ ! ! !

ಆರ್ತ ಕೂಗು ಅಸಹಾಯ ಕೂಗು— ಸರೋಜಳದು.

" ಇನ್ನು ಹಚ್ರಿ ಬೆಂಕಿ "

ನಾಯಕ ಆಜ್ಞಾಪಿಸಿದ ತೃಪ್ತಿಯ ನಗೆಯೊಂದಿಗೆ

ಅನುಯಾಯಿಗಳು ಮೂರು ಜೀವಿಗಳನ್ನು— ಸುರೇಶ, ಸರೋಜಾ ಅವರ ಮಗು— ಒಳಗೆ ಹಾಕಿ ಬಾಗಿಲು ಎಳೆದುಕೊಂಡರು.

ಮರುಕ್ಷಣ ಜ್ವಾಲೆ ತನ್ನ ಕೆನ್ನಾಲಿಗೆ ಸಹಸ್ರ—ಅಸಂಖ್ಯರೂಪ ತಾಳಿತು. ಒಳಗೆ ಮೂರು ಜೀವಿಗಳು ತಮ್ಮ ಜೀವ ರಕ್ಷಣೆಗಾಗಿ ಹೋರಾಡುತಿದ್ದವು.

ಆರ್ತ ಕೂಗು

ಜಗದ ಕರುಣೆಯನ್ನು ಕಲಕುವ ದೃಶ್ಯ.

ಐದು ನಿಮಿಷದಲ್ಲಿ ಮನೆಯ ನಾಲ್ಕೂ ದಿಕ್ಕಿನಿಂದ ಜ್ವಾಲೆ ಹಬ್ಬಿದಂತೆ ಮೂರು ಜೀವಿಗಳ ಕರುಣ ಕ್ರಂದನ ಜ್ವಾಲೆಯ ' ಛಟ್ ... ಪಟ್ ' ಸಪ್ಪಳ ವನ್ನು ಭೇದಿಸಿ ಬರುತಿತ್ತು

ನೋಡುತ ನಿಂತ ಅಹಿಂಸಾವಾದಿಗಳ ಮುಖದಿಂದ ವಿಕಟಾಟ್ಟಹಾಸ ಅಸಹ್ಯವಾಗಿ ಪ್ರತಿಧ್ವನಿಸುತಿತ್ತು.

ಮೇಲಿನಿಂದ – ನೀಲ ಗಗನದಿಂದ ' ಟಪ್......ಟಪ್' ಹನಿ ಉದುರು ತಿತ್ತು — ಕಣ್ಣೀರು !

" .... ಅಯ್ಯೋ... .. ! ...ಹ್ಹಾ . ! .. ಹ್ಹಾ ...! ! ... ಉಳಿಸಿ . ... ಹ್ಹಾ . . ! ....ಹ್ಹಾ ೩ . . . .. ಹ್ಹಾ ೩ ...೩ . ೩.... ! ! ! . ! ! ! ! ! ! "

ಕೂಗು ಮಹಾಜ್ವಾಲೆಯ ಮಧ್ಯದಿಂದ ಬರುತಿತ್ತು ಸುರೇಶ ಸರೋಜೆಯ ಆರ್ತ ಕೂಗು, ಹಸು ಮಗುವಿನ ಕರುಣ ದನಿ ! ಒಂದು ಕ್ಷಣ ಆ ಕೊಲೆ ಗಡಕರ ಹೃದಯವೂ ಕರಗಿರಬಹುದೇನೋ ಅವರು ಅಲ್ಲಿ ನಿಲ್ಲಲಾರದೆ ವಿಕಟವಾಗಿ ನಗೆ ತೂರುತ್ತ ಹೊರಟು ಹೋದರು.

ನೀಲ ಗಗನದಿಂದ ಅಶ್ರು ಕೆಳಗೆ ಉದುರುತಿದ್ದವು.

ಒಳಗಿನ ಜೀವಿಗಳು ಯಾವಾಗಲೋ ಭಸ್ಮವಾಗಿದ್ದರು.

ಮಹಾತ್ಮನ ಕಣ್ಣೀರು ಕಟ್ಟೆಯೊಡೆಯಿತು. ಮಳೆಯಾಗಿ ಸುರಿಯ ತೊಡಗಿತು

ಭೀಕರ ನಿಶ್ಶಬ್ದ ನಿಶೆ ಜಗತ್ತನ್ನಾವರಿಸಿಕೊಂಡಿತು.

" ಹ್ಹಾಂ ! ! "

ಗಾಳಿಯಲ್ಲಿ ದನಿಯೊಂದು ಕೇಳಿ ಬರುತಿತ್ತು

" ಹ್ಹಾಂ ! ! "

# ಶನಿ ಸಮಾಜ



" ಸ್ಕೂಲಿಕ್ಕೆ ಬರ್ತೀಯಾ ಶಂಕ್ರೂ "

" . .. .. ........ .... "

" ಯಾಕೆ ಶಂಕ್ರೂ ಮಾತಾಡುದಿಲ್ಲಾ ? "

ಆ ದನಿಯಲ್ಲಿ ದೈನ್ಯ ಸ್ನೇಹ ಪ್ರೇಮ ವ್ಯಕ್ತವಾಗಿತ್ತು

ಶಂಕರ ಮಾತನಾಡಲಿಲ್ಲ. ಮೌನವಾಗಿ ರಾಮನನ್ನೇ ನೋಡುತಿದ್ದ. ಆ ಮೌನದ ಹಿಂದೆ ಯಾವುದೋ ಒಂದು ಅಸಂತೋಷ ಕಳವಳ ಭೀತಿ ತಾಂಡವವಾಡುತಿರುವಂತೆ ತೋರುತಿತ್ತು

ಶಂಕರನ ಈ ಮೌನ ಮುದ್ರೆಯ ಅರ್ಥ ಎಂಟು ವರುಷದ ಆ ಚಿಕ್ಕ ಮಗು ಅರಿಯಲಸಮರ್ಥವಾಯಿತು.

ಅವನು ಮತ್ತೆ ಕೇಳಿದ.

ಯಾಕೆ ಶಂಕ್ರೂ ಮಾತಾಡುದಿಲ್ಲಾ ? ಆಡೂಣು ಬರುದಿಲ್ಲಾ ? ಅವ್ವ ಬೈದ್ಲ ? "

ರಾಮನ ಕಣ್ಣಂಚು ಕಣ್ಣೀರು ಉದುರಿಸಿತು.

ರಾಮನ ಈ ಪ್ರೇಮದ ಪ್ರಶ್ನೆ, ಸಾಂತ್ವನದಿಂದ ಶಂಕರನ ಮೌನ ಮುದ್ರೆ ಒಡೆಯಿತು. ರಾಮನ ಜತೆ ಆಡಲು ಅವನ ಮನಸು ಆತುರ ಪಡುತಿತ್ತು.

ಆದರೆ.... ... ! ಆದರೆ ಹಿಂದಿನ ದಿನದ ಆ ರುದ್ರ ಘಟನೆ, ತಂದೆಯ ಉಗ್ರ ಮೂರ್ತಿ ಅವನ ಕಣ್ಣೆದುರು ಸುಳಿದು ನಿಂತಾಗಲೆಲ್ಲ ಎದೆ ನಡುಗುತಿತ್ತು.

ಮನಸು ರಾಮನ ಜತೆ ಆಡಲು ಅಂಜುತಿತ್ತು.

ಮತ್ತೆ ನಿನ್ನಿನಂತಾದರೆ !

ಶಂಕ್ರು ಮೌನವಾಗಿದ್ದ.

" ಬರೂದಿಲ್ವಾ ಶಂಕ್ರು ? "

ರಾಮು ಕಣ್ಣೀರೊರಸಿಕೊಂಡ. ಅವನ ಸ್ನೇಹದ ಕರೆ ಶಂಕರನ ನಿರ್ಧಾರವನ್ನು ಕೊಚ್ಚಿಕೊಂಡು ಹೋಯಿತು.

" ಬರ್ತೀನಿ ರಾಮೂ "

ಇಬ್ಬರೂ ಕೈಹಿಡಿದು ಬಯಲಿನತ್ತ ಆಡಲೆಂದು ಹೋದರು.

ಶಂಕರನ ' ಬಂಗ್ಲೆ ' ವೆರಾಂಡಿನಲ್ಲಿಯೇ ವಿಶಾಲವಾದ ಸುಂದರ ಬಯಲು. ಹೂಗಿಡ ಬಳ್ಳಿ ಸುಂದರವಾಗಿತ್ತು. ಅಲ್ಲಿಯೇ ಗೆಳೆಯರಿಬ್ಬರೂ ಆಡತೊಡಗಿದರು.

ಅಟ್ಟದ ಮೇಲೆ ನಿಂತು ಇವನ್ನು ನೋಡುತಿದ್ದ ವೀರಪ್ಪನವರ ಸಿಟ್ಟು ಕೆರಳಿತು ಕೆಳಗೆ ಆಡುತಿದ್ದ ಶಂಕರನನ್ನು ದರದರ ಎಳೆಯುತ್ತ ಮನೆಗೆ ತಂದರು

" ಇನ್ನೊಮ್ಮೆ ಆ ದರಿದ್ರ ಭಿಕಾರಿ ಜತೆ ಆಡಿದ್ದು ಕಂಡು ಬಂದ್ರೆ ನಿನ್ನ ಎಲುಬು ಉಳಿಸಾಕಿಲ್ಲ ಅಂಥ ಭಿಕಾರಿ ಜತೆ ಆಡ್ತಾ ಇರೋದು ಕಂಡು ಬಲ್ಲಿ. ನಾವ್ಯಾರು ಅವರ್ಯಾರು ಈಗಿನಿಂದೇ ತಿಳಿದೆ ಹೋದ್ರೆ ನಾಳೆ ನೀವೆಲ್ಲಾ ಒಂದೇ ಎಲೆಯಲ್ಲಿ ಕೂತು ಉಣ್ಣಿಕ್ಕೂ ಹೇಸೋಕಿಲ್ಲ "

ಎಂದು ಶಂಕರನನ್ನು ನಾಲ್ಕೇಟು ಬಿಗಿದು ತಾಕೀತು ಮಾಡಿದರು

" ಭೀಮ್ಯಾ ಆ ದರಿದ್ರ ಹುಡುಗ ಇನ್ನೊಮ್ಮೆ ಇಲ್ಲಿ ಬರ್ದಂತೆ ನೋಡ್ಕೊ"

ಎಂದು ಆಳಿಗೆ ತಾಕೀತು ಕೊಟ್ಟರು.

ರಾಮು ಪೆಚ್ಚು ಮೋರೆ ಹಾಕಿ ಮನೆಗೆ ಮರಳಿದ.

ವೀರಪ್ಪನವರು ಲಕ್ಷಾಧೀಶರೆಂದು ಎಲ್ಲರೂ ಬಲ್ಲರು. ಸಟ್ಟಾ ವ್ಯವಹಾರ ಅವರನ್ನು ಆ ಪಟ್ಟಕ್ಕೆ ಏರಿಸಿತ್ತು. ಬಡ್ಡಿಯ ವ್ಯವಹಾರದಿಂದ ಅವರು ಕೋಟ್ಯಾಧೀಶರೂ ಎನಿಸಿಕೊಂಡಿದ್ದರು. ತಮ್ಮ ಶ್ರೀಮಂತಿಕೆಯ ಪ್ರದರ್ಶನ

ಎಷ್ಟು ಮಾಡಿದರೂ ವೀರಪ್ಪನವರಿಗೆ ತೃಪ್ತಿ ಇಲ್ಲ. ತಮ್ಮ ಸ್ಥಿತಿಯ ಬಗೆ ಅವರಿಗೆ ತುಂಬಾ ಹೆಮ್ಮೆ ಅಭಿಮಾನ ಅದನ್ನು ಎಲ್ಲರೆದುರು ಆಡಿ ತೋರಿಸದೆ ಅವರಿಗೆ ಸಮಾಧಾನವಿಲ್ಲ. ತನ್ನ ಸರಿ ಸಮಾನಸ್ಕಂದರಲ್ಲದಂಥವರು ತನ್ನ ಜತೆಯಲ್ಲಿ ಕುಳಿತುಕೊಳ್ಳಲು ಮಾತನಾಡಲು ಎಂದೆಂದಿಗೂ ಯೋಗ್ಯರಲ್ಲ ಎಂದು ಅವರ ಧೃಢವಾದ ಭಾವನೆ. ತನ್ನ ಮಗನಾದವನೂ ತನ್ನಂತೆಯೇ ತನ್ನ ಮನೆತನದ ಗೌರವ ಶ್ರೀಮಂತಿಕೆಯ ಘನ ಭಾವನೆ ತನ್ನ ಬಗ್ಗೆ ಜನತೆಯಲ್ಲಿದ್ದ ಭೀತಿ – ಗೌರವದ ಪರಂಪರೆ ಕಾಯ್ದುಕೊಂಡು ಬರಬೇಕು ಅವನಿಗೆ ಈಗಿನಿಂದಲೆ ಹಾಗೆ ಶಿಕ್ಷಣ ಕೊಡುವುದು ತನ್ನ ಕರ್ತವ್ಯ. ಎಂದು ವೀರಪ್ಪನವರು ತಿಳಿದು ಕೊಂಡಿದ್ದರು. ಅಂತೆಯೇ ಅವರು ಮಗನ ಮೇಲೆ ಅಷ್ಟು ನಿಷ್ಠುರವಾಗಿ ನಡೆದುಕೊಂಡಿದ್ದರು

ವೀರಪ್ಪನವರ ಈ ವಿರಾಟ ರೂಪವನ್ನು ಕಂಡು ಶಂಕರ ಭೂಮಿಗಿಳಿದು ಹೋಗಿದ್ದ ಅವನ ಎದೆ ನಡುಗಿ ಹೆಪ್ಪುಗಟ್ಟಿದಂತಾಗಿತ್ತು. ತಂದೆ ತನ್ನನ್ನು ಬಯ್ದದುಂಟು ಆದರೆ ಈ ರೂಪು – ಇದೇ ಮೊದಲು

ಅಪ್ಪ ರಾಮನೊಂದಿಗೆ ಆಡಲು ಏಕೆ ಪ್ರತಿಬಂಧಿಸ್ತಾರೆ ?

ಈ ಸಮಸ್ಯೆ ಶಂಕರನ ಮಿದುಳಿಗೆ ಬಗೆ ಹರಿಯದಾಗಿತ್ತು ಎಳೆಯ ಬಾಲಕನ ಶುಭ್ರವಾದ ನಿರ್ಮಲವಾದ ಆ ಸ್ವಚ್ಛ ಮನಸಿನ ಮೇಲೆ ಧನಿಕ-ದರಿದ್ರ, ಊಚ-ನೀಚ, ಪಾಮರ-ಪಂಡಿತರೆಂಬ ಭೇದ ಭಾವದ ಯಾವ ಕಪ್ಪು ಕಲೆಗಳೂ ಮೂಡಿರಲಿಲ್ಲ. ಅದು ಹಸನಾದ ಹಲಗೆಯಂತೆ, ಯಾವ ಗೀಚು ಗೆರೆಗಳೂ ಅಲ್ಲಿಲ್ಲ

ಆ ಕಪ್ಪು ಕಲೆ ಗೀಚು ಗೆರೆ ವೀರಪ್ಪನವರು ಮಗನ ಹೃದಯದ ಮೇಲೆ ಮೂಡಿಸಲು ಪ್ರಯತ್ನಿಸತೊಡಗಿದ್ದರು. ಅದು ಅವರಿಗೆ ಗೌರವ ಘನತೆಯ ಚಿನ್ಹೆ ಎನಿಸಿತ್ತು

ಅವರ ಪ್ರಯತ್ನ ಶಂಕರನ ಹೃದಯಕ್ಕೆ ಬರೆ ಎಳೆದಂತಾಗಿತ್ತು.

ರಾಮನ ಸ್ನೇಹ ತಂದೆಯ ಕ್ರೌರ್ಯ !

ಎರಡು ಮಹಾ ಶಕ್ತಿಗಳ ಮಧ್ಯೆ ಶಂಕರ ತೊಳಲಾಡುತಿದ್ದ.

ರಾಮ, ಬಡವ, ಬಡವರಲ್ಲಿ ಬಡವ ಅವನ ತಂದೆ ದಾರಿದ್ರ್ಯದ ಪ್ರತೀಕ ಪ್ರಪಂಚದ ದಾರಿದ್ರ್ಯವೆಲ್ಲ ಅವನ ಜೋಪಡಿಯಲ್ಲಿಯೇ ಆಶ್ರಯ ಪಡೆದಂತಿದೆ. ಅದಕ್ಕೆ ಅವನ ಮಕ್ಕಳ ಅಸ್ಥಿಪಂಜರವೇ ಸಾಕ್ಷಿ ! ಹರಕು ಹರಕು ಬಟ್ಟೆ. 'ಬಟ್ಟೆ ಇದೆ' ಎನ್ನುವದಕ್ಕೆ ಅದು ಮೊದಲು ಯಾವ ಬಣ್ಣದ್ದೊ ! ಈಗ ಬದಾಮಿ ಬಣ್ಣಕ್ಕೆ ತಿರುಗಿದೆ. ಅವರಿಗೆ ಒಂದು ಗಟ್ಟಿಯಾದ ಗುಡಿಸಲು ಇಲ್ಲ ಹೊಟ್ಟೆಗೆ ಒಂದು ಗುಟುಕು ಅಂಬಲಿ ಗಳಿಸಬೇಕಾದರೆ ಹೊಟ್ಟೆಯ ಕರುಳು ಬಾಯಿಗೆ ಬರುವವರೆಗೆ ದುಡಿಯಬೇಕು–ಅಂಗಲಾಚಬೇಕು. ಆ ಜೀವಂತ ಹೆಣದ ದುಡಿತಕ್ಕೆ ಪ್ರತಿಫಲವಾದರೂ ಎಷ್ಟು ?

ಸಾಲದುದಕ್ಕೆ ಪ್ರತಿ ವರುಷವೂ ಒಂದು ಹೊಸ ಮಗು – ಹೊಸ ಕ್ಯಾಲೆಂಡರ ಬಂದಂತೆ !

ಅವನ ಶನಿ ಇಷ್ಟಕ್ಕೆ ನಿಲ್ಲಬೇಕೆ ?–ಇಲ್ಲ !

ಎಂಟು ವರುಷದ ಮಗು, ರಾಮನ ಮದುವೆಯೂ ಮುಗಿದು ಹೋಗಿ ಎರಡು ವರುಷ ಕಳೆದಿದೆ. ದುರ್ದೈವ ! ಅವನ ಬೆನ್ನಮೇಲೆ ಅಭಯಹಸ್ತ ಚಾಚಿದೆ.

ಇಂತಹ ಕಟು ದಾರಿದ್ರ್ಯದ ಮೂರ್ತಿ ರಾಮು ! ಅವ ಬಡವರ ಮಗು ಅವನ ಮುಗ್ಧತೆಗೆ ಬಡತನವಿರಲಿಲ್ಲ ಅವನ ನಿಶ್ಚಿಂತತೆ ಪ್ರಾಮಾಣಿಕತೆಗೆ ಬಡತನವಿರಲಿಲ್ಲ ಅವನ ಉಲ್ಲಾಸಕ್ಕೆ ಬಡತನವಿಲ್ಲ.

ಆದರೂ ಅವನು ಬಡವ. ಅಂತೆಯೇ ಅವನು ಅಯೋಗ್ಯ !

ಪ್ರಪಂಚದ ಸಿಹಿ–ಕಹಿಗಳನರಿಯದ ಆ ಮಗೂ ಶ್ರೀಮಂತರಿಗೆ ತಿರಸ್ಕೃತ ಅವನ ಜೀವನದ ಮಂದಾರ ಕುಸುಮ ಶ್ರೀಮಂತರ ಕಠೋರ ನೀತಿಗೆ ತತ್ತರಿಸುತಿದೆ.

ರಾಮು ಶಂಕರನ ಸ್ನೇಹಕ್ಕಾಗಿ ಹಾತೊರೆಯುತಿದಾನೆ ವೀರಪ್ಪನವರ ಉಗ್ರ ಮೂರ್ತಿ ಅವನನ್ನು ಹೆದರಿಸಿ ಹಿಂದಕಟ್ಟುತಿದೆ.

ರಾಮು ಶಂಕರ, ಇಬ್ಬರ ಮನಸೂ ಒಬ್ಬರೊಬ್ಬರನ್ನು ಆಕರ್ಷಿಸುತಿದೆ.

ಸ್ನೇಹದ ಎರಡು ಹೃದಯಗಳು ಬೆಸೆಯದಂತೆ ಪೀರಪ್ಪನವರು ಜಾಗ್ರತೆ ವಹಿಸುತ್ತಿದ್ದಾರೆ

ಇಬ್ಬರ ಹೃದಯದಲ್ಲಿಯ ಸ್ನೇಹದ ಕುಡಿ, ಪ್ರೇಮದ ಜಲ ಸಿಂಚನವಿಲ್ಲದೆ ಬಾಡ ತೊಡಗಿತು.

✤ ✤ ✤ ✤ ✤ ✤

ಆ ಘಟನೆ ನಡೆದು ಹೋಗಿ ಸುಮಾರು ಹದಿನೈದು ವರುಷ ಉರುಳಿ ಹೋಗಿವೆ-ಹದಿನೈದು ವರುಷ !

ಈ ದೀರ್ಘ ಕಾಲಾವಧಿಯಲ್ಲಿ ಅನೇಕ ಸ್ಥಿತ್ಯಂತರಗಳು ಸಂಭವಿಸಿವೆ ಶಂಕರ ತುಂಬ ಹರೆಯದವನಾಗಿದ್ದಾನೆ ಶ್ರೀಮಂತಿಕೆಯ ಗರ್ವ, ಅಭಿಮಾನ, ಸೊಕ್ಕು ತಾಂಡವವಾಡುತ್ತಿದೆ ತಂದೆಯ 'ಭೇದ ಭಾವ' ದ ಬಿತ್ತಿಗೆಯ ಬೆಳೆ ಹುಲುಸಾಗಿ ಫಲವತ್ತಾಗಿ ಬೆಳೆದುಕೊಂಡಿದೆ ಹದಿನೈದು ವರುಷದ ಶ್ರೀಮಂತಿಕೆಯ ಪರಿಸರಣ, ಆ ನಿರ್ದಯ, ಕಠೋರ ನಡತೆಯ ಪಡಿಯಚ್ಚಿನಲ್ಲಿ ತಾನೂ ಅದರಂತೆ ಎರಕ ಹೊಯ್ದುಕೊಂಡಿದ್ದಾನೆ.

ಶಂಕರನ ವಿವಾಹವಾಗಿದೆ. ಆ ಭೋಗ, ವಿಲಾಸ, ಸೇವೆ ಯಾವುದೂ ಕೊರತೆಯಿಲ್ಲ ತನ್ನ 'ಸುಖ-ವಿಲಾಸ' ಇವಿಷ್ಟೇ ಅವನ ಜೀವನದ ಪ್ರಧಾನ ಲಕ್ಷ್ಯ! ಅವನಿಗೆ ಪ್ರಪಂಚವಿದೆ ತನಗಾಗಿ, ವ್ಯವಹಾರ, ದುಡ್ಡು ಇದೆ ತನ್ನ ಹಿತಕ್ಕಾಗಿ, ಬಡವರು, ದರಿದ್ರರಿದ್ದಾರೆ ತನ್ನ ಸೇವಕರಾಗಲು, ಶ್ರೀಮಂತರಿದ್ದಾರೆ ತನ್ನ ಗೆಳೆಯರಾಗಲು.

ಇತ್ತ ರಾಮನ ಬಾಳು.

ಅದು ದಾರಿದ್ರ್ಯತೆಯ ಮರುಭೂಮಿಯಾಗಿದೆ. ಅಲ್ಲಿ ಸುಖದ ಮೋಡ ಸುಳಿಯಲಾರದು ಆನಂದದ ಹನಿ ಉದುರಲಾರದು. ಸಂತಸದ ಹಸಿರು ಚಿಗುರಲಾರದು. ಅಲ್ಲಿ ಕೇವಲ ನಿರಾಶೆಯ ಅಪಾರ ಸಹರಾ ಮರುಭೂಮಿ ! ಆಗಾಗ ದುಃಖದ ಸುಂಟರಗಾಳಿ ಏಳುತ್ತಿದೆ ಶೋಕದ ಧೂಳು ಎಬ್ಬಿಸುತ್ತಿದೆ. ಅಸಹ್ಯವಾದ ದುಃಖದ ರಣಬಿಸಿಲು ಸಹನೆಯನ್ನು ಕಾಯಿಸುತ್ತಿದೆ. ಈಗಲೋ ಇನ್ನೊಂದು ಕ್ಷಣಕ್ಕೋ ಸ್ಫೋಟವಾಗುವಂತೆ ಕುದಿಯುವ ದಾರಿದ್ರ್ಯದ ಜ್ವಾಲಾಮುಖಿ !

ರಾಮನಿಗೆ ಇಂತಹ ದಾರಿದ್ರ್ಯದಲ್ಲಿಯೂ–ಮೂರು ಮಕ್ಕಳು !

ಶನಿಯ ಕಾಟದ ಕಠೋರತೆ ಇದಕ್ಕೂ ಹೆಚ್ಚು ಇದೆಯೆ ? –ಇದೆ.

ಅದೂ ಅವನ ಬಾಳಿನಲ್ಲಿ !

ಮೂರನೆಯ ಮಗು ಕಾಹಿಲೆ ಬೀಳುತ್ತಿದೆ. ಎಂತಹ ದಾರಿದ್ರ್ಯ ತಲೆ ಕುಕ್ಕುತ್ತಿದ್ದರೂ ಹೊಟ್ಟೆಯ ಮಕ್ಕಳು ಭಾರವಾಗಬಹುದೆ ?– ಇಲ್ಲ ! ರಾಮನ ಕರುಳು ತಳಮಳಿಸಿ ಪ್ರಚಂಡ ಕಿಚ್ಚಿನಲ್ಲಿ ಬಿದ್ದು ಚಡಪಡಿಸುವ ಪತಂಗದಂತಾಗಿದೆ ಮಗುವಿಗೆ ಒಂದು ಹನಿ ಗಂಜಿಗೂ ಬಿಡಿಕಾಸಿಲ್ಲ !

ಮಗು ಬಾಯಿಬಾಯಿ ಬಿಡುತ್ತಿದೆ ! ಹೆತ್ತ ಕರುಳು ಹೇಗೆ ಸಹಿಸೀತು ! !

ದುಡಿಯ ಬೇಕೆಂದರೆ ದುಡಿಸಿಕೊಳುವವರಿಲ್ಲ ವಿಶ್ವಪ್ರಯತ್ನ ಪಟ್ಟು ' ಗೊಡೌನ ಕೀಪರ ' ಆಗಿದ್ದ – ಒಂದು ತಿಂಗಳು ರಜೆಯ ಮೇಲೆ ಹೋದ ಶಿಪ್ಪಾ ಮರಳಿದಾಗ—

ರಾಮ ' ಗೋ ಡೌನ ! '

ಈಗ ?

ಶಂಕರನೇ ಗತಿ ! ನೋಡಬೇಕು ಹಳೆಯ ಸ್ನೇಹ–ಒಂದು ಕಾಸು ಕೊಟ್ಟರೆ

ರಾಮ ಒಂದೊಂದು ಹೆಜ್ಜೆ ಮುಂದಡಿ ಇಡುತ್ತಿದ್ದ. ಶನಿ ಸಮಾಜ ಅವನ ಬೆನ್ನಟ್ಟಿತ್ತು–ಶನಿ ಸಮಾಜ !

ಬಂದಿತು ! ಅದೇ ಶಂಕರನ ಮನೆ ಭವ್ಯ ಬಂಗಲೆ !

" ಶಂಕರೂ ... . .. "

ಅದೇ ಸ್ನೇಹದ ಕರೆ ಒಲವು ಉಕ್ಕುತ್ತಿದೆ ಅದೇ ಮಾಧುರ್ಯ ಸ್ನೇಹದ ಬೆಸುಗೆ

ಶಂಕರ ತಿರುಗಿ ನೋಡಿದ. ಯಾವನೋ ಒಬ್ಬ ತಿರುಕ ! ತನಗೆ ' ಶಂಕರೂ ' ಎಂದು ಕರೆಯುತ್ತಿದಾನೆ. ಎಂತಹ ಸೊಕ್ಕು ! ಹೆ ಹೋಗಲಿ ಬಿಡು.

ಶಂಕರ ತಿರಸ್ಕಾರದಿಂದ ನೋಡಿ ಮತ್ತೆ ಗೆಳೆಯರೊಂದಿಗೆ ' ರಮಿ ' ಆಟದಲ್ಲಿ ಮಗ್ನನಾದ.

"ಶಂಕರೂ ನನ್ನ ಮರೆತ್ಯಾ?"

ರಾಮ ತನ್ನ ಸ್ನೇಹದ ಭಾಂಡಾರವನ್ನೇ ಒಡೆದು ಶಂಕರನೆದುರು ಹರವಿದ್ದ ಅದರ ಬೆಲೆಯನರಿತುಕೊಳುವಷ್ಟು ಶಂಕರನು ಸುಸಂಸ್ಕೃತನಾಗಿರಲಿಲ್ಲ

ಶಂಕರ ದಿಟ್ಟಿಸಿ ನೋಡಿದ ಎಲ್ಲಿಯೋ ನೋಡಿದ ಹಾಗೆ—ಎಲ್ಲಿಯೊ!

ಎಲ್ಲಿ?

—ಹೋಗಲಿ ಬಿಡು

ಸಮಾಧಾನವಾಗಲಿಲ್ಲ.

ಯಾವನಾದರೂ ಭಿಕ್ಷುಕನಾಗಿರಬಹುದು

ಇಲ್ಲ

ಮತ್ತೆ ಯಾರು?

ರಾಮನೇ ಹೇಳಿದ—

"ಶಂಕರೂ ನೀ ನನ್ನನ್ನು ಮರೆತಿರಬಹುದು. ನಾ ನಿನ್ನ ಮರ್‍ಯಾಕಿಲ್ಲ. ನಾ ರಾಮ ಶಂಕರೂ, ಸಣ್ಣಗಿರ್ತ ಇಬ್ರೂ ಆಡತಿದ್ದಿವು ನೋಡು."

ರಾಮ!

ಅಹುದು ಅವನೆ!

ಆದರೆ ರಾಮ ಈಗ ಬಡವ, ನಾನು ಕೋಟ್ಯಾಧೀಶ ಅವನ ಜತೆ ಸಲಿಗೆಯಿಂದ ಮಾತನಾಡಿದರೆ ಸರಿಕರಲ್ಲಿ ಸರಿದೋರಲಾರದು ಹೆಚ್ಚು ಸಮಯ ಇವನು ಇಲ್ಲಿ ಕುಳಿತುಕೊಳ್ಳುವದೂ ನನ್ನ ಅಭಿಮಾನಕ್ಕೆ ಕೇಡು

"ಏನು ಬಂದೆ ರಾಮು?"

ರಾಮನಿಗೆ ನಿರಾಶೆಯಾಯಿತು ಆಶೆಯ ಅಖಂಡ ಆಧಾರವನ್ನೇ ನಂಬಿ ಬಂದಿದ್ದ. ಏನೇನೋ ಕನಸು ಕಲ್ಪಿಸಿಕೊಂಡು ಬಂದಿದ್ದ 'ಕೃಷ್ಣ—ಸುದಾಮ' ಮಾದರಿ. ಆದರೆ ರಾಮ ಇಲ್ಲಿ ಅನುಭವಿಸುವದು ಅದರ ವಿರುದ್ಧ

"ಶಂಕರೂ! ನನ್ನ ಮಗೂ ಯಮನ ದವಡ್ಯಾಗ ಸಿಕ್ಕಿ ಚಡಪಡಸಾಕ ಹತ್ತೇತಿ. ನಾ ಬಡವ. ಒಂದು ಹೊತ್ತು ಅಂಬಲಿಗೂ ಗತಿಯಿಲ್ಲ. ನಾವ ಹ್ಯಾಂಗಾದ್ರೂ ಉಪ್ವಾಸ ತೆಗಿಬಹುದು. ಆದ್ರ ಕೂಸಿನ ಚಡಪಡಿಕಿ ಕಣ್ಣಿನಿಂದ

ಹ್ಯಾಂಗ ನೋಡ್ಲಿ ! ಸಾಯು ಹೊತ್ನಾಗಾದ್ರೂ ಅದರ ಹೊಟ್ಟಿ ತುಂಬಸ್ಬೇಕಂತೀನಿ . ಕೂಸಿನ ತಂದಿ ನಾ ಹ್ಯಾಂಗ ನೋಡಲಿ.... "

ರಾಮನ ಕಂಠ ಬಿಗಿದು ಬಂದು ಮಾತು ಹೊರಡದಾಯಿತು. ನಿಧಾನವಾಗಿ–ಕಣ್ಣೊರಸಿಕೊಳುತ ಹೇಳತೊಡಗಿದ.

" ...ನೀ ನಂಗ ಸಹಾಯ ಮಾಡು ಶಂಕರೂ. ನನ್ನ ಕೂಸಿನ ಸಾಯೂ ಹೊತ್ನಾಗ ಒಂದು ಗ ಟುಕು ಗಂಜೀ ಹಾಕಿದ ಪುಣ್ಯ ನಿನಗ ಬರ್ತೈತಿ. ಕೂಸು ಸಾಯ್ತಾ ಇದ್ರೂ ಬದುಕಿಸಬೇಕಂತ ಆಸೆ ದೊಡ್ಡ ಮನಸ ಮಾಡಿ ಐದು ರೂಪಾಯಿ ಕೊಡಬಹುದು ಅಂತ ನಿನ್ನ ಹಂತೀಲಿ ಬಂದೀನಿ ನನ್ನ ನಿರಾಶೆ ಮಾಡಬ್ಯಾಡ ನಾ ಸಾಯೂವರೆವಿಗೆ ನಿನ್ನ ಉಪಕಾರ ಮರೆಯಾಕಿಲ್ಲ ಮೈಯಲ್ಲಿ ಶಕ್ತಿ ಇರೋದ್ರ ವಳಗ ಮುಟ್ಟಿಸ್ತೀನಿ . ಶಂಕರೂ ! ! "

ರಾಮನಿಂದ ಮುಂದೆ ಮಾತು ಹೊರಡಲಿಲ್ಲ.

ಶಂಕರನಿಗೆ ಕನಿಕರವೇನೂ ಎನಿಸಲಿಲ್ಲ ' ಎಷ್ಟು ದರಿದ್ರ ಇದ್ದರೇನು ? ಐದು ರೂಪಾಯಿ ಇರಲಾರವೇ ? ಸುಳ್ಳು ಸೋಗು ಇದು ' ಎಂದು ಮನಸಿನಲ್ಲಿ ರಾಮನ ಬಗ್ಗೆ ಆಶ್ಚರ್ಯ–ತಿರಸ್ಕಾರ ರಾಮನ ಹೃದಯದ್ರಾವಕ ನೋಟ ಶಂಕರನ ಕರುಳು ಕರಗಿಸಲಿಲ್ಲ

ಆದರೆ ಅವನು ತನ್ನ ಗೆಳೆಯರೆದುರು ತನ್ನ ಗೌರವವನ್ನೂ ಕಡಿಮೆ ಮಾಡಿಕೊಳ್ಳಲು ಸಿದ್ಧನಾಗಿರಲಿಲ್ಲ ರೂಪಾಯಿ ಕೊಡಲೂ ಮನಸಿಲ್ಲ

ಕಡೆಗೆ ಒಂದು ಮಾರ್ಗ ಹೊಳೆಯಿತು

" ಇಲ್ಲಿ ನೋಡು . ಅಂ ನಿನ್ನ ಹೆಸರೇನು ? "

" ರಾಮು "

" ಹ್ಞಂ, ಇಲ್ಲಿ ನೋಡು ರಾಮು. ನಿನ್ನದೇನೂ ನನಗೆ ಪರಿಚಯವಿಲ್ಲ. ನಿನ್ನ ' ಶಂಕರ ' ಬೇರೆ ಇರಬಹುದು ಎಲ್ಲೋ ತಪ್ಪು ತಿಳಿದುಕೊಂಡಿದೀಯ. ಆದರೂ ನಿನ್ನ ಸ್ಥಿತಿ ಕೇಳಿದಾಗ ಏನೋ ಕೆಡಕೆನಿಸುತಿದೆ ... ...ಆದರೆ . ... ಆದರೆ .... ಹ್ಞಾಂ ! ನಿನ್ನದೇನಾದರೂ ಆಸ್ತಿ ಗೀಸ್ತಿ ಇದೆಯೆ ? "

ಉಫ್ ! ಎಂತಹ ಮೋಸ ! ಅನ್ಯಾಯ ! ' ನಿನ್ನ ಶಂಕರ ಬೇರೆ ಇರಬಹುದು ' ನಿಜ ತನ್ನ ಶಂಕರ ಬೇರೆ. ಆ ಶಂಕರ ಎಂದೋ ತೀರಿದ ಇವನು ಬೇರೆ. ಆದರೆ ಅವನೆ. ಇವನ ಹತ್ತಿರ ಹಣ ಪಡೆಯುವದು ತನ್ನ ಸ್ವಾಭಿಮಾನಕ್ಕೆ ಅಪಮಾನ. ಆದರೆ ದಾರಿದ್ರ್ಯದ ಶಾಪಕ್ಕೆ ಎಲ್ಲವನ್ನೂ ಸಹನೆ ಮಾಡಬೇಕು.

" ಒಂದು ಜೋಪಡಿ ಐತಿ. ಅದೇ ನನ್ನ ಆಸ್ತಿ ಶಂಕರೂ "

" ಇರಲಿ, ಅದನ್ನೇ ಬರೆದುಕೊಡು ಹಣ ಕೊಡುತ್ತೇನೆ "

ರಾಮು ಮರು ಮಾತನಾಡಲಿಲ್ಲ. ಎಲ್ಲದಕ್ಕೂ ಬಡತನ, ದಾರಿದ್ರ್ಯ ಬಾಯಿ ಮುಚ್ಚಿಸುತಿತ್ತು

" ಯಾಕೆ ಮನಸಿಲ್ಲವೆ ? "

" ಬರಕೊಡ್ತೀನಿ ಶಂಕರೂ ! "

ಬರೆದು ಕೊಟ್ಟಿದ್ದರೂ ತನಗೆ ರೂಪಾಯಿ ಕೊಡುತಿದ್ದರೆ ಯಾರಾದರೂ ! ಇಷ್ಟಾದರೂ ದೊಡ್ಡ ಮನಸು ಮಾಡಿದ ಶಂಕರೂ ! ಅವನಿಗೆ ಒಳ್ಳೆಯದಾಗಲಿ.

ರಾಮು ತನ್ನ ಎಡಗೈ ಹೆಬ್ಬಟ್ಟೊತ್ತಿ ಹತ್ತು ರೂಪಾಯಿಯ ಕಾಗದ ಬರೆದು ಕೊಟ್ಟು ಐದು ರೂಪಾಯಿ ತೆಗೆದುಕೊಂಡು ಮನೆಗೆ ಮರಳಿದ

ರಾಮು ಮನೆ ಮುಟ್ಟುವದರೊಳಗೆ ಮಗು ಸ್ವರ್ಗ ಮುಟ್ಟಿತ್ತು.

⁂

ಈ ಘಟನೆ ಸಂಭವಿಸಿ ಮೂರು ವರುಷ ಹಿಂದೆ ಸರಿದಿದೆ. ರಾಮುನ ಸಾಲದ ಹಣ ಹತ್ತು ರೂಪಾಯಿಯಿಂದ ಇಪ್ಪತ್ತಕ್ಕೇರಿದೆ.

ಶಂಕರ ಹಣಕ್ಕಾಗಿ ತಗಾದೆ ಹಚ್ಚಿದಾನೆ.

ರಾಮುನ ದಾರಿದ್ರ್ಯದಲ್ಲಿ ಉದಾಸೀನತೆ ಉರಿಯಾಗಿ ದಹಿಸತೊಡಗಿದೆ.

ಶಂಕರ ರಾಮುನನ್ನು ಕರೆಸಿ ಕೇಳಿದ.

" ನಿನ್ನ ರೊಕ್ಕಾ ಈವರೆಗೂ ಬರಲಿಲ್ಲ ರಾಮು "

" ನನ್ನ ದೇಹದಾಗ ನೆತ್ರಾ ಇರೊದ್ರ ಒಳಗ ಮುಟ್ಟಿಸ್ತೀನಿ ಶಂಕರೂ "

" ನನಗೆ ನಿನ್ನ ದುಡಿತಬೇಕಾಗಿಲ್ಲ. "

" ಎಲ್ಲಿಯಾದರೂ ಕೆಲಸ ಸಿಕ್ಕುತ್ತೆನೋ ನೋಡ್ತೀನಿ ಶಂಕರೂ ಸ್ವಲ್ಪ ದಿನಾ ತಡೀರಿ. "

" ರೂಪಾಯಿ ಕೊಟ್ಟವರ ಉಪಕಾರ ನೆನೆಸಲಿಲ್ಲ ರಾಮ. "

" ಹಾಂಗನಬ್ಯಾಡ ಶಂಕ್ರೂ ! ಸಾಯೋವರೆಗೆ ನಿನ್ನ ಉಪ್ಪು ಮರೆಯಾಕಿಲ್ಲ. "

" ಬರೀ ನೆನಪಿನಿಂದ ಪ್ರಯೋಜನವಿಲ್ಲ ರಾಮು "

" ಸ್ವಲ್ಪ ದಿನಾ ತಡೀ ಶಂಕರೂ "

" ಸಾಧ್ಯವಿಲ್ಲ ಈಗಾಗಲೇ ಬಡ್ಡಿ ಅಸಲು ಮಿಕ್ಕಿದೆ ಅಷ್ಟು ರಕಮು ನಿನ್ನ ಆಸ್ತಿಗೆ ಮಿಕ್ಕುತಿದೆ. "

" . . ... ........ "

" ನಿನ್ನ ಜೋಪಡಿ ಲಿಲಾವು ಮಾಡ್ತೀವಿ ರಾಮು "

ರಾಮು ಅವಾಕ್ಕಾಗಿ ಕುಳಿತಿದ್ದ ಚಿತ್ರದಲ್ಲಿಯ ಗೊಂಬೆಯಂತೆ

" ನೋಡು ಸಾಧ್ಯವಿದ್ದರೆ ಕೊಡುತ್ತೀಯಾ–ಇನ್ನು ನಾಲ್ಕು ದಿನ ಸಮಯ ಕೊಡುತ್ತೀನ ? "

' ... ... . . .. "

" ಅದೇ ನಾ ಬಲ್ಲೆ ' ಸಾಲವನು ಕೊಂಡಾಗ ಹಾಲೋಗರುಂಡಂತೆ, ಸಾಲಿಗರು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ ಅಲ್ಲವೆ.'

" ಇಲ್ಲ ಶಂಕರೂ ಹಾಗನ್ನಬ್ಯಾಡ ...ಹಾಂಗನ್ನಬ್ಯಾಡ ಶಂಕರೂ .. "

ರಾಮನ ಕಂಠ ಬಿಗಿದು ಬಂದಿತ್ತು. ಶಂಕರನ ಪಾದಮೇಲೆ ಮಸ್ತಕವಿಟ್ಟು

" ನನ್ನ ಮಕ್ಳು ಮರಿ, ಶಂಕರೂ ಕಾಪಾಡು ಅವು ಚಳಿಯಾಗಬಿದ್ದು ಸತ್ತೋಗುತ್ತವೆ. ಕೆಲವೇ ದಿಂದಾಗ ನಿನ್ನ ಸಾಲಾ ಮುಟ್ಟಿಸ್ತೀನಿ ಶಂಕರೂ "

" ಸಾಧ್ಯವಿಲ್ಲ ರಾಮು. ಆ ವಿಶ್ವಾಸ ಕಳೆದುಕೊಂಡಿರುವೆ ನಾಳೆ ಸಂಜೆಯವರೆಗೆ ಮುದ್ದತ್ತು ಕೊಡುತ್ತೇನೆ. ಅಷ್ಟರಲ್ಲಿ ಹಣ ತೀರಿಸಲು ಸಾಧ್ಯವಾಗದಿದ್ದರೆ ಮುಂದಿನ ಮಾರ್ಗ ನನಗೆ ಅನುಸರಿಸದೆ ಗತ್ಯಂತರವಿಲ್ಲ.

ಶಂಕರ ನಿಷ್ಠುರವಾಗಿ ನುಡಿದ. ಒಳಗೆ ಹೊರಟುಹೋದ

ದುಃಖ ನಿರಾಸೆ–ಅಸಹಾಯತೆ.

ಮೂರು ಹೊರಲಾರದ ಹೊರೆಹೊತ್ತು ರಾಮು ಮನೆಗೆ ಮರಳುತಿದ್ದ ತನ್ನ ಮನೆ ಸಮೀಪಿಸಿದಂತೆ ಅವನಿಗೆ ದುಃಖ, ಕಳವಳ ಈ ಮನೆ ... . ಈ ಮನೆ ಇನ್ನು ತನ್ನದಲ್ಲ! ಇದು ಸಾಹುಕಾರರಿಗೆ ಸಲ್ಲಬೇಕು .. ... .. ..

ಇನ್ನು ತನಗೆ ಆಶ್ರಯ ?

ಸಮಾಜವೇ ನನ್ನನ್ನು ಪ್ರಪಂಚದಿಂದ ತಳ್ಳುತಿರುವಾಗ ತನಗೆಲ್ಲಿ ಆಶ್ರಯ!

ಸಮಾಜದಲ್ಲಿ ಬಡವರಿಗೆ ಸ್ಥಾನವಿಲ್ಲ! ದರಿದ್ರರಿಗೆ ಆಶ್ರಯವಿಲ್ಲ! ಬಿದ್ದವರನ್ನು ಇನ್ನೂ ತುಳಿಯುತಿದೆ ಸಮಾಜ! ಎಬ್ಬಿಸುವವರು ಯಾರೂ ಇಲ್ಲ!

ಶನಿ ಸಮಾಜ !

'ನಾಳೆ' 'ನಿನ್ನೆ' ಯಾಯಿತು. ರಾಮುನಿಗೆ ಹಣ ತೀರಿಸಲು ಸಾಧ್ಯವಾಗಲಿಲ್ಲ

ಶಂಕರ 'ಬೇಲೀಫ್' ನೊಂದಿಗೆ ಬಂದು ರಾಮನ ಗುಡಿಸಲು ಜಪ್ತ ಮಾಡಿಸಿ ತನ್ನ ಸ್ವಾಧೀನ ತೆಗೆದುಕೊಂಡ.

ಹೆಂಡತಿ, ಎರಡು ಮಕ್ಕಳೊಂದಿಗೆ ಮೈ ಕೊರೆವ ಚಳಿಯಲ್ಲಿ ರಾಮು ಬೇವಿನ ಗಿಡದ ಆಶ್ರಯದತ್ತ ನಡೆದ

ಕೆಲದಿನ ಮೇಲೆ ಗುಡಿಸಲು ಲಿಲಾವಾಯಿತು. ಏಳು ರೂಪಾಯಿಗೆ.

ಇನ್ನುಳಿದ ಹದಿಮೂರು ತೀರಿಸಲು ರಾಮನ ಹೆಂಡತಿ ಇಂದಿಗೂ ಶಂಕರನ ಮನೆಯ ಮುಸುರೆ ತಿಕ್ಕುತಿದಾಳೆ.

ರಾಮು ಮಾತ್ರ ಈ ಪ್ರಪಂಚದಿಂದ ಕಣ್ಮರೆಯಾಗಿದಾನೆ .

# ಬಾಳತೊಡಕು



ಬೆಳುದಿಂಗಳು ಹಿಟ್ಟು ಚೆಲ್ಲಿದಂತೆ ಬಿದ್ದಿತ್ತು ಪ್ರಶಾಂತವಾದ ಅನಂತವಾದ ನೀಲಿಯಾಕಾಶದಲ್ಲಿ ಚಂದ್ರ ನಗುನಗುತ ನಭೋ ಮಂಡಲವನ್ನು ಬೆಳಗುತಲಿದಾನೆ. ಕೊರಳು ಸರ ಹರಿದು ಬಿದ್ದು ಚೆಲ್ಲವರಿದ ಮುತ್ತಿನಂತೆ ನಕ್ಷತ್ರಗಳು ಆಕಾಶದ ತುಂಬ ಹರಡಿಕೊಂಡಿವೆ. ದೂರದಲ್ಲಿಯ ಕಪ್ಪು ಕಪ್ಪಾದ ಗುಡ್ಡ ಉದ್ದವಾಗಿ ಪ್ರಚಂಡವಾದ ಹೆಬ್ಬಾವಿನಂತೆ ಬಿದ್ದುಕೊಂಡಿತ್ತು. ದಾರಿಯ ಆಚೆ-ಈಚೆಗೆ ಜೋಳದ ಹಸಿರು ಹಸುರು ದುಂಡು ದುಂಡಾದ ತೆನೆ ಹೊತ್ತು ತಂಪಾದ ಗಾಳಿಯನ್ನು ಸ್ವಾಗತಿಸುತಿದೆ.

ತಂಪು ಬೆಳದಿಂಗಳ ಹಾಲಿನಲ್ಲಿ ಮಿಂದ ಸೃಷ್ಟಿಮಾತೆಯ ಅವರ್ಣನೀಯ ಸೌಂದರ್ಯದ ಸೊಬಗು ಆ ಪ್ರದೇಶ.

ಎಲ್ಲ ಕಡೆಗೂ ತಂಪು ಗಾಳಿ ಸುಗಂಧ ಸೂಸುತಿತ್ತು

ಗುಡ್ಡದ ಅಂಚಿಗುಂಟ ಅಂಕು ಡೊಂಕಾಗಿ ಹರಿದುಹೋದ ಸೀಳು ದಾರಿಯಲ್ಲಿ ನಿಂಗಿ ಈರ ನಿಧಾನವಾಗಿ ಬರುತಿದ್ದರು. ಸುತ್ತಲಿನ ಸೌಂದರ್ಯ ಸವಿಯುತ್ತ

“ ಎಷ್ಟು ಚೆಂದಾಗೈತಾ ಈ ಬೆಳುದಿಂಗ್ಳು ! ”

ನಿಂಗಿ ಉತ್ಸಾಹದಿಂದ ಹೇಳಿದಳು

“ ಹ್ಞೂಂ ”

“ ಒಂದ್ಗಳಿಗ್ಗಿ ಕುಂತ್ಕೋಳೋಣಾ ಇಲ್ಲಿ ? ”

“ ಹೊತ್ತಾತ ನಡಿ ನಿಂಗಿ, ಗಡಾ ಗಡಾ ಹೆಜ್ಜಿ ಹಾಕ. ”

“ಯಾಕ್ಲಾ ಅಟ್ಯಾಕ ಅವಸ್ರಾ ಮಾಡ್ತಿ?”

“ಸಂಗಣ್ಣಾ ಕಾಕಾ ನಿನ್ನ ಹಾದೀ ನೋಡ್ತಿರಬೇಕು”

“ಹಾದಿ ಯಾಕ ನೋಡ್ತಾನ?”

“ದಿನಾ ಲಗೂಟ ಬರಾವ್ರು ಇಂವ ಹೊತ್ತಾತು.”

“ಹೊತ್ತಾದ್ರ?”

“ದೆವ್ವಿನಂಗ ನೀ ಅದೀಲಾ ಹಂತೀಲಿ, ಮತ್ಯಾಕ ಅಂಜ್ಕಿ.”

“ಅತ ಬಿಡ. ಗಡಾ ಗಡಾ ಹೆಜ್ಜಿ ಹಾಕ ನಂಗ ಹಸೂ ಸಂಗ್ಟ.”

“ತನಗ ಹಸೀವ್ಯಾಗೇತಿ. ಏನಾರ ನೆವಾ ಹೇಳ್ತಾನ.”

ಎಂದು ನಿಂಗಿ ಬೇಗ ಬೇಗ ಹೆಜ್ಜೆ ಹಾಕತೊಡಗಿದಳು.

ನಿಂಗಿ ಸಂಗಣ್ಣನ ಮಗಳು ಆರು ವರುಷದವಳಿರುವಾಗಲೇ ಅವಳ ತಾಯಿ ತೀರಿದ್ದಳು. ಸಂಗಣ್ಣನೇ ಅವಳಿಗೆ ತಾಯಿ ತಂದೆ.

ತಾಯಿ ಇಲ್ಲದ ಮಗು ಎಂದು ಸಂಗಣ್ಣ ನಿಂಗಿಯನ್ನು ವಿಶೇಷ ಸಲುಗೆಯಿಂದ ಬೆಳೆಸಿದ್ದ.

ಅವನೂ ತೀರ ಬಡವ ಆದರೆ ಅವನ ದೇಹ ಶಕ್ತಿಗೆ ಬಡತನವಿರಲಿಲ್ಲ. ಅದೇ ಅವನ ಆಸ್ತಿ. ಸಂಜೆಯವರೆಗೆ ಬೆವರು ಹರಿಸಿ ದುಡಿಯುತಿದ್ದ. ಸಂತೋಷವಾಗಿ ಉಂಡು ನಿದ್ರೆ ಹೋಗುತಿದ್ದ.

ಆಗ ನಿಂಗಿಗೆ ಹತ್ತು ವರುಷ.

ಮಗಳ ಮದುವೆ ಮಾಡಿ ಸಂಗಣ್ಣ ಚಿಂತಾಮುಕ್ತನಾಗಿದ್ದ. ಮುಂಜಾವಿನಲ್ಲಿ ಅಡಿಗೆ ಮಾಡಿಟ್ಟು ಮಗಳೂ ತಾನೂ ಊಟಮಾಡಿ ಕೆಲಸಕ್ಕೆ ಹೋಗುತಿದ್ದ. ನಿಂಗಿ ತಂದೆ ಬರುವವರೆಗೆ ಮನೆ ನೋಡಿಕೊಳುತಿದ್ದಳು. ಜತೆಯಲ್ಲಿ ಈರನೂ ಒಮ್ಮೊಮ್ಮೆ ಆಟಕ್ಕೆ ಬರುತಿದ್ದ. ಅವನು ದನಗಳನ್ನು ಅಟ್ಟಿಕೊಂಡು ಗುಡ್ಡಕ್ಕೆ ಹೋದಾಗ ನಿಂಗಿಯೊಬ್ಬಳೇ ಗಳಿಗೆ ಎಣಿಸುತ್ತ ದಿನ ದೂಡುತಿದ್ದಳು. ಸಂಜೆಗೆ ಸಂಗಣ್ಣ ಮನೆಗೆ ಬಂದಾಗ ಮತ್ತೆ ಅವಳ ಮುಖದ ಮೇಲೆ ಗೆಲುವಿನ ಮೊಗ್ಗೆ ಅರಳುತಿತ್ತು.

ನಿಂಗಿಯ ಮದುವೆಯಾಗಿ ಎರಡನೆಯ ವರುಷವೇ ಎರಡನೆಯ ಮಹಾ ಯುದ್ಧ ಪ್ರಾರಂಭವಾಯಿತು.

ಬೇಡ ಬೇಡವೆಂದರೂ ಕೆಂಚ ಸೈನ್ಯ ಸೇರಿದ.

ಅಳಿಯನಿಗೆ ಸೈನ್ಯ ಸೇರಲು ಪ್ರೋತ್ಸಾಹಿಸಿ ಅವನ ಅಜ್ಞಾನದ ದುರ್ಲಾಭ ಪಡೆದು 'ರಾವ್‌ಸಾಹೇಬ' ಪದವಿ ಪಡೆದ ಗೋಪಾಲರಾಯರ ಮೇಲೆ ಸಂಗಣ್ಣ ಹಲ್ಲು ಕಡಿಯುತಿದ್ದ– ಬರೀ ಹಲ್ಲು. ಅಷ್ಟೆ

ಅವನಿಗೆ ಆಕಾಶ ಹರಿದು ಬಿದ್ದಂತಾಗಿತ್ತು. ಮಗಳನ್ನು ಗಂಡನ ಮನೆಗೆ ಕಳುಹಿಸಿ 'ರಾಮ–ರಾಮ' ಎಂದು ಕಾಲ ಕಳೆಯಬೇಕೆಂದಿದ್ದ ವಿಧಿ ಹಾಗೆ ನಡೆಯಗೊಡಲಿಲ್ಲ

ನಿಂಗಿ ಗಂಡನ ಮುಖ ಕಡೆಯದಾಗಿ ಕಂಡದ್ದು ಅಕ್ಷತೆಯ ಕಾಲದಲ್ಲಿ. ಅದೇ ಕೊನೆಯ ದರ್ಶನ ಅವಳಿಗೆ ಆದರೂ ಗಂಡನ ಬಗ್ಗೆ ಅವಳಲ್ಲಿ ಪ್ರೇಮ ಗೌರವ. ಚಿಕ್ಕಂದಿನಲ್ಲಿ ಕೂಡಿ ಆಡಿದ ಸವಿನೆನಪು—

ಅದೇ ಅವಳಿಗ ಕೆಂಚ ಬಿಟ್ಟುಹೋದ ಆಸ್ತಿ

ಅದನ್ನೇ ನಿಂಗಿ ನೆನೆಯುತ್ತ ಆನಂದಿಸುತಾಳೆ

ಗಂಡ ಸೈನ್ಯ ಸೇರಿದಾಗ ನಿಂಗಿ ತಳಮಳಿಸಿದ್ದಳು. ಕುದಿಯುವ ಎಣ್ಣೆಯಲ್ಲಿ ಚೆಲ್ಲಿದ ಜೀವಂತ ಮೀನಿನಂತೆ. ಅಲ್ಲಿಯೂ ಒಂದು ಸಂಜೀವಿನಿ ಅವಳನ್ನು ಬದುಕಿಸಿತ್ತು – ತನ್ನ ಗಂಡ ಬೇಗ ಮರಳುತ್ತಾನೆ

ಅದೇ ಆಶಾಕಿರಣದ ಮೇಲೆ ನಿಂಗಿ ದಿನ ದೂಡುತಿದ್ದಳು. ಚಾತಕ ಪಕ್ಷಿಯಂತೆ

✤ ✤ ✤ ✤ ✤ ✤

ವರುಷಗಳೆರಡು ಉರುಳಿದವು.

ಕೆಂಚ ಬರಲಿಲ್ಲ.

ಅನಿಷ್ಟ ವಾರ್ತೆಯೊಂದು ಗಾಳಿಯಲ್ಲಿ ತೇಲಿ ತೇಲಿ ಬಂದಿತು.

ಸಂಗಣ್ಣನ ಬಾಗಿಲಿಗೂ ಬಂದು ಅಪ್ಪಳಿಸಿತು—ಸಿಡಿಲಿನಂತೆ.

" ಕೆಂಚ ಯುದ್ಧದಲ್ಲಿ ಮಡಿದ ! "

ಸಂಗಣ್ಣ ಸಿಂಗಿ ಇಬ್ಬರೂ ಆ ಆಘಾತಕ್ಕೆ ಕುಸಿದು ಬಿದ್ದರು

ಇದ್ದ ಒಂದು ಆಶಾಕಿರಣವೂ ಸಿಂಗಿಯ ಪಾಲಿಗೆ ಮರೆಯಾಯಿತು.

ಬಾಳಿನ ಕಾಳ ಕತ್ತಲೆಯಲ್ಲಿ ಅವಳು ದಿಕ್ಕು ಕಾಣದಾದಳು

* * * * * *

ಆ ಘಟನೆಗೆ ಈಗ ಎಂಟು ವರುಷ ಉರುಳಿ ಹೋಗಿವೆ.

ಸಿಂಗಿ ಗಂಡನ ಮನೆಗೆ ಹೋಗಲಿಲ್ಲ ಏತಕ್ಕೆ ಹೋಗಬೇಕು ಬಾಳಿನ ದಾರಿಯೇ ಕುಸಿದು ಬಿದ್ದು ತವರು ಮನೆ – ಗಂಡನ ಮನೆಯ ಮಧ್ಯೆ ದೊಡ್ಡ ಕೊರಕಲು ಬಿದ್ದಾಗ ? ಸಿಂಗಿ ತಂದೆಯ ಬಳಿಯಲ್ಲಿಯೇ ಇದ್ದಳು

ಸಂಗಣ್ಣನಿಗೂ ಈಗ ವಯಸ್ಸು ಕಳೆದು ಹೋಗಿದೆ ಗುಡಿಸಲಿನಲ್ಲಿಯೇ ನೂಲುತ್ತ ಕುಳಿತಿರುತ್ತಾನೆ ಸಿಂಗಿ ಮುಂಜಾವಿನ ಅಡಿಗೆ ಮಾಡಿಟ್ಟು ಮಿಲ್ ಕೆಲಸಕ್ಕೆ ಹೋದಳೆಂದರೆ ಬರುವದು ರಾತ್ರಿ ಎಂಟೂವರೆಗೆ.

ಈರ ಅವಳ ಜತೆ ಕೆಲಸಗಾರ

ಅವನ ಗುಡಿಸಲೂ ಅಲ್ಲಿಯೆ. ಅಲ್ಲಿ ತಾನೊಬ್ಬನೇ ಇರುತ್ತಾನೆ ನಾಲ್ಕು ವರುಷದ ಹಿಂದೆ ಅವನ ತಾಯಿ ಹಣ್ಣು ಹಣ್ಣು ಮುದುಕಿ ಇದ್ದಳು. ಈಗ ಇಲ್ಲ ಈರ ಧೃಢಕಾಯ. ಇಪ್ಪತ್ತಾರು–ಏಳು ವಯಸ್ಸು ಪುಷ್ಟವಾದ ಹುರಿಕಟ್ಟಾದ ದೇಹ. ಆತನೂ ಮುಂಜಾವಿನಲ್ಲಿ ಮುದ್ದೆ ಬೇಯಿಸಿಟ್ಟು ಕೆಲಸಕ್ಕೆ ಹೋಗುತ್ತಾನೆ. ಸಂಜೆಗೆ ಬಂದಾಗ ಮುಂಜಾವಿನಲ್ಲಿ ಉಳಿದದ್ದೇ ಇದ್ದರೆ ಅದನ್ನೇ ತಿಂದು ಮಲಗುತ್ತಾನೆ. ಬೇಸರ ಬಂದಾಗ ಹಾಗೆಯೇ ನಿದ್ರಿಸುತ್ತಾನೆ. ಆಗ ಸಿಂಗಿ ಅವನನ್ನು ಬಲಾತ್ಕಾರದಿಂದ ಊಟಕ್ಕೆಳೆದೊಯ್ಯುತ್ತಿದ್ದಳು. ಸಂಗಣ್ಣನದೂ ತುಂಬಾ ಪ್ರೇಮ ಅವನಲ್ಲಿ.

ನಿಂಗಿ ಇಗ ಬೆಳೆದಿದ್ದಳು. ಪ್ರಾಯಕ್ಕೆ ಸಹಜವಾದ ಮಾರ್ಪಾಟು ಅವಳಲ್ಲಾಗಿತ್ತು ಸುಂದರವಾದ ಅವಳ ನಿಲುವು, ಗುಲಾಬಿಯಂತಹ ಕೆನ್ನೆಗಳು, ವಿಶಾಲವಾದ ಕಣ್ಣು ಮೀನಿನಂತೆ ಚಂಚಲವಾಗಿದ್ದವು ನೀಳವಾದ ಕೇಶರಾಶಿ, ತುಂಬಿದ ಎದೆ ಗುಡಿಯ ಗೋಪುರಕ್ಕೆ ಜೋಡು ಕಳಸವಿಟ್ಟಂತೆ. ತುಂಬಿದ ಕಾಂತಿಯುಕ್ತವಾದ ಮೈ. ಹಳ್ಳಿಯ ಕಾಡು ಹೂ. ಆದರೂ ಆ ಸೌಂದರ್ಯ ಆ ಸೊಬಗು ಜೀವನವಲ್ಲಿಯ ವಸಂತ ಕಾಲವದು

ಅವಳಿಗೂ ಆ ಬಯಕೆ, ಆ ಸ್ನೇಹ. ದೇಹ ಮನಸ್ಸು ಎರಡೂ ಅದನ್ನು ಬಯಸುತಿತ್ತು.

ಆದರೆ 'ತಾನು ವಿಧವೆ' ಎಂಬ ಭಯಂಕರ ಅರಿವಿನ ಶಾಪ ಅವಳ ಬಯಕೆಗಳನ್ನು ಕೆಳಗೆ ದಬ್ಬುತಿತ್ತು.

ಯೌವನದ ಆಸೆ ಅದನ್ನು ರಬ್ಬರಿನ ಚೆಂಡಿನಂತೆ ಮೇಲೆ ಪುಟಿಸುತಿತ್ತು.

ಈರನ ಸಾನಿಧ್ಯಕ್ಕೆ ಅದು ಇನ್ನೂ ಮೇಲಕ್ಕೆ ಪುಟಿಸುತಿತ್ತು.

ಸಂಗಣ್ಣನಿಗೂ ಈ ಚಿಂತೆ ಬಾಧಿಸದಿರಲಿಲ್ಲ ಹಗಲಿರುಳು ಅವನನ್ನು ಈ ಚಿಂತೆ ಕಾಡಿಸುತಿತ್ತು ಬೆಳೆದು ನಿಂತ ಮಗಳು. ಅವಳ ಆಸೆ ಆಕಾಂಕ್ಷೆ ಗಳನ್ನೂ ಅವನು ಚನ್ನಾಗಿ ಅರಿಯದಿರಲಿಲ್ಲ

ಸಂಗಣ್ಣನ ಸಮಾಜದಲ್ಲಿ ಪುನರ್ವಿವಾಹಕ್ಕೆ ಪ್ರತಿಬಂಧವಿರಲಿಲ್ಲ 'ಉಡಿಕೆ' ಎಂದು ತುಂಬ ಬಳಕೆಯಲಿತ್ತು

ಹರೆಯದ ಹೊಸ್ತಿಲಮೇಲೆ ನಿಂತ ಮಗಳನ್ನು ವೈಧವ್ಯದ ಬಂಧನದಲ್ಲಿ ಡುವದು ಸಂಗಣ್ಣನಿಗೆ 'ಸರಿ' ಎಂದು ಎನಿಸಲಿಲ್ಲ

ಆ ಪ್ರಯತ್ನ 'ಗಾಳಿಯನ್ನು ಬಂಧಿಸಿಟ್ಟಂತೆ' ಎಂದು ಅವನು ಬಲ್ಲ.

ನಿಂಗಿಯ ವಿವಾಹ ವಿಷಯವಾಗಿ ವಿಚಾರಿಸಿದಾಗಲೆಲ್ಲ ಸಂಗಣ್ಣನಿಗೆ ಈರನದೇ ಚಿತ್ರ ಕಣ್ಣೆದುರು ಸುಳಿಯುತಿದೆ ಅವರಿಬ್ಬರಲ್ಲಿ ಅನ್ಯೋನ್ಯವಾದ ಮಧುರ ಪ್ರೇಮ ದಿನ ದಿನವೂ ಬೆಳೆಯುತಿದೆ ಎಂಬುದನ್ನು ಬಲ್ಲ. ಈರನೂ ಪರದೇಸಿ ತುಂಬ ಒಳ್ಳೆಯ ಹುಡುಗ ಮಗಳೂ ಅಳಿಯ ಮನೆಯಲ್ಲಿಯೇ— ತನ್ನ ಕಣ್ಣೆದುರು—ಇರುವವರೆಂಬ ಸಂತೋಷ ಬೇರೆ.

ನಿಂಗಿ ಈರ ಪರಸ್ಪರರಲ್ಲಿ ಮಧುರ ಪ್ರೇಮ ಹರಡಿ ಅವರಿಬ್ಬರನ್ನು ಒಂದೇ ಚೌಕಟ್ಟಿನಲ್ಲಿ ಕೂಡ್ರಿಸಿತ್ತು. ತಾನು ನಿಂಗಿಯನ್ನೇ ಮದುವೆಯಾಗುವುದೆಂದು ನಿಶ್ಚಯಿಸಿದ್ದ.

ನಿಂಗಿಯೂ ಅವನ ಪ್ರೇಮದ ಬಂಧನವನ್ನು ನಗುತ್ತ ಸ್ವಾಗತಿಸುತ್ತಿದ್ದಳು.

ಆದರೆ ಕೆಂಚನನ್ನು ನೆನೆಸಿದಾಗಲೆಲ್ಲ 'ಈ ಮದವಿ ಬ್ಯಾಡ. ಇನ್ಯಾಕ ಬೇಕ ನನಗ ಮದ್ವಿ' ಎಂದು ನಿರುತ್ಸಾಹ ತಾಳುತಿತ್ತು ಮನಸು. ಆದರೆ ಈರನ ಸಹವಾಸ, ತನ್ನ ಜೀವನದ ಬಯಕೆ, ಮುಂದಣ ಕನಸು ಈರನತ್ತ ಆಕರ್ಷಿಸುತಿತ್ತು.

ಒಂದು ಕಡೆ ಕೆಂಚನ ಮೇಲಿನ ಗತಪ್ರೇಮ

ಇನ್ನೊಂದು ಕಡೆ ಈರನ ಸಹವಾಸ.

ಆ ಸಹವಾಸದ ಬಿಸಿಗೆ ಬೆಣ್ಣೆಯಂತಹ ದೇಹ ಕರಗಿತ್ತು. ಅಂತೆಯೇ ಅವಳು 'ಉಡುಕಿ'ಗೆ ಸಮ್ಮತಿಸಿದ್ದಳು

ಸಂಗಣ್ಣ ನಿಂಗಿ, ಈರರನ್ನು ಕರೆದುಕೊಂಡು ವಕೀಲರ ಮನೆಗೆ ಬಂದ. ನಿಂಗಿ–ಕೆಂಚ ಮದುವೆ ಮೊದಲು ಮಾಡಿ ತಾನು ಕುಳಿತಿರುವ ಸಮಯದ ವರೆಗಿನ ಎಲ್ಲ ಘಟನೆಗಳನ್ನೂ ವಿವರವಾಗಿ ಹೇಳಿದ

“ಪತಿ ಎಂಬೋನು ಷಂಡನಾಗಿದ್ದರೆ, ಅವನಿಗೆ ಮಹಾರೋಗದಂತಹ ಪರಿಹರಿಸಲಸಾಧ್ಯವಾದ ರೋಗಗಳಿದ್ದರೆ, ಇಲ್ಲವೆ ಅವನ ಸಮ್ಮತಿ ಇದ್ದರೆ, ಇಲ್ಲವೆ ಹತ್ತು ವರುಷಗಳ ಕಾಲ ಅವನು ನಾಪತ್ತೆಯಾಗಿದ್ದರೆ, ಇವುಗಳಲ್ಲಿ ಯಾವುದಾದರೂ ಒಂದು ಕಾರಣ ಸತ್ಯವಿದ್ದಲ್ಲಿ ಹೆಂಡತಿಗೆ ಪುನರ್ವಿವಾಹದ ಹಕ್ಕು ಇದೆ.”

ಎಂದು ವಕೀಲರು ಹೇಳಿದರು.

“ನಿಮ್ಮ ಮಗಳಿಗೆ 'ಉಡಕಿ' ಮಾಡಿಕೊಳ್ಳಲು ಬರುತ್ತದೆ”

ಎಂದು ಇನ್ನೊಮ್ಮೆ ತಿಳಿಯುವಂತೆ ಸಂಗಣ್ಣನಿಗೆ ವಿವರಿಸಿದರು.

ಸಂಗಣ್ಣ ಸಂತೋಷವಾಗಿ ಅವರ ಕೈಗೆ ಹತ್ತು ರೂಪಾಯಿಯ ಎರಡು ನೋಟುಗಳನ್ನು 'ಬಡವನ ಕಾಣಿಕೆ' ಎಂದು ಇಟ್ಟ.

ನಿಂಗಿ ಈರ ಇಬ್ಬರ ವಿವಾಹವಾಯಿತು. ಅವರ ಆನಂದಕ್ಕೆ ಉತ್ಸಾಹಕ್ಕೆ ಎಣೆಯಿಲ್ಲ

ಈರ ಮದುವೆಯ ನಂತರ ಸುಖವಾಗಿ ಮಾವನ ಮನೆಯಲ್ಲಿಯೇ ಇರತೊಡಗಿದ ಅವನ ಬಾಳು ಬಂಡಿ ರಾಜಮಾರ್ಗದಲ್ಲಿ ನಡೆದಿತ್ತು

ನಿಂಗಿ ಮನೆಯಲ್ಲಿಯೇ ಇರುತಿದ್ದಳು ಈರನ ದುಡಿಮೆಯಲ್ಲಿ ಮೂರು ಜೀವಿಗಳ ಜೀವನ ಸುಖವಾಗಿ ಸಾಗಿತ್ತು

ಬಾಳ ಸೇತುವೆಯನ್ನು ನಿಂಗಿ ಈರ ಸುಖವಾಗಿ ದಾಟುತಿದ್ದಾರ.

ಅವರಿಬ್ಬರ ಪ್ರೇಮದ ಕುಡಿ ಹೂ ಬಿಟ್ಟಿದೆ "ಹನುಮ" ಅವರಿಬ್ಬರ ಪ್ರೇಮದ ಫಲ ಮನೆಯನ್ನು ಆನಂದದ ಹಾಲುಗಡಲಿನಲ್ಲಿ ತೇಲಿಸುತಿದೆ ಆ ಮಗು

ಎರಡನೆಯ ಮಹಾಯುದ್ಧದಲ್ಲಿ ಸೆರೆಯಾಳಾದ ಕೈದಿಗಳ ಬಿಡುಗಡೆಯಾಗುತ್ತದೆ ಕೆಂಚ ವಿಜಯದ ಉತ್ಸಾಹದಿಂದ ರೈಲನೇರಿದ.

ಯಾವಾಗ ಮನೆ ಬಂದೀತು ?

ನಿಂಗಿ ಹೇಗಿದ್ದಾಳು ?

ಸಂಗಣ್ಣ ?

ಅವರನ್ನು ನೋಡುವ ಆತುರದಿಂದ ಊರಿಗೆ ಮರಳುತಿದ್ದಾನೆ. ಸಂಗಣ್ಣನ ಗುಡಿಸಲು ಹಾಗೇ ಇದೆ ಸಂಗಣ್ಣ ಬಾಗಿಲಲ್ಲಿ ಕುಳಿತಿದ್ದಾನೆ. ಮುದುಕನಾಗಿದ್ದಾನೆ.

"ಸಂಗಣ್ಣ ಮಾವಾ"

ಕೆಂಚ ನಮಸ್ಕರಿಸಿದ

"ಯಾರು ತಮ್ಮ ?"

"ಗುರುತು ಸಿಕ್ಕಲಿಲ್ಲವೆ ?"

ಅಷ್ಟೊತ್ತಿಗಾಗಲೇ ನಿಂಗಿಯೂ ಮಗುವನೆತ್ತಿಕೊಂಡು ಬಾಗಿಲಿಗೆ ಬರುತ್ತಾಳೆ.

"ನಾನು ಕೆಂಚ ಮಾಮಾ !"

ಎಂದು ಕೆಂಚ ನಿಂಗಿಯನ್ನು ನೋಡಿದ

ಸಂಗಣ್ಣ ನಿಂಗಿ ಇಬ್ಬರೂ ಚಿತ್ರದ ಗೊಂಬೆಯಂತೆ ನಿಂತಿದ್ದರು.

---

# ಸಾಹಿತ್ಯ ಸೇವಾ ನಿಲಯ ಗೋಕಾಕ



## ಆಶ್ರಯದಾತರು

| | | |
|---|---|---|
| ಡಾ\|\| ಸಾ\|\| | ಎ. ಜಿ. ದೇಶಪಾಂಡೆ | ಗೋಕಾಕ |
| ಶ್ರೀಮಾನ್ | ಅನಂತರಾವ ಕರಗುಪ್ಪಿಕರ | ,, |
| ,, | ಕೆ. ವಿ. ಸುಪಲಿ | ,, |

## ಸಹಾಯಕರು

| | | |
|---|---|---|
| ಶ್ರೀಮಾನ್ | ಗಣಪತರಾವ್ ಸ್ವಾಮಿ B A LL. B. | ,, |
| ,, | ಎ ಕೆ. ಸಾತಪುತೆ (ಉಪಾಧ್ಯಕ್ಷ ಗೋಕಾಕ ನಗರ ಸಭೆ) | ,, |
| ಡಾ\|\| | ಹಣಮಂತರಾವ ರೂಗಿಕರ | ,, |
| ಶ್ರೀಮಾನ್ | ಎ. ಪಿ. ಕಲ್ಯಾಣಶೆಟ್ಟಿ ( ಸ್ಟೇಶನರಿ ಮರ್ಚಂಟ್ಸ) | ,, |
| ,, | ಎಲ್. ವಿ. ದೇಶಪಾಂಡೆ | ,, |
| ,, | ವೆಂಕಟೇಶ ಕರಗುಪ್ಪಿ | ಕರಗುಪ್ಪಿ |
| ,, | ಪಾಟೀಲ ಬಾಳಗೌಡರು | ,, |
| ,, | ಪಾಟೀಲ ಭೀಮನಗೌಡರು | ಎಲ್ಲಾಪೂರ್ |
| ,, | ಎಸ್. ಬಿ. ಸುಪಲಿ | ಗೋಕಾಕ |
| ,, | ಡಿ. ವಿ. ಪಾಟೀಲ | ,, |
| ,, | ಬಿ. ಜಿ ಕುಲಕರ್ಣಿ | ,, |
| ,, | ಶಂಕರೆಪ್ಪ ಭರಭರಿ | ,, |
| ,, | ಜಿ. ಎನ್. ಕುಲಕರ್ಣಿ | ,, |
| ,, | ದೇವೇಂದ್ರ ಎತ್ತಿನಮನಿ | ,, |
| ಶ್ರೀಮತಿ | ಅಂಬಾಬಾಯಿ ರೂಗಿಕರ | ,, |
| ,, | ಉಮಾಬಾಯಿ ದೇಶಪಾಂಡೆ | ,, |
| ,, | ಇಂದಿರಾಬಾಯಿ ಕುಲಕರ್ಣಿ | ,, |



ಓದುಗರು ತಮ್ಮ ಅಭಿಪ್ರಾಯವನ್ನು ನೇರವಾಗಿ
ಲೇಖಕರಿಗೆ ಬರೆದು ಕಳುಹಿಸಿದಲ್ಲಿ ತುಂಬ ಆಭಾರಿ.

## ರಾಜಾರಾಮ್ ಮಜಲೀಕರ್ ಅವರ

## ಪುಸ್ತಕಗಳು



| | |
|---|---|
| ದೇವ ಪರೀಕ್ಷಾ | ಚಿಕ್ಕ ನಾಟಕ |
| ಬಾಳಕೊಡಕು | ಕಥಾ ಸಂಗ್ರಹ |

### ಅಚ್ಚಿನಲ್ಲಿ

| | |
|---|---|
| ಶ್ರದ್ಧಾಂಜಲಿ | ಕಾದಂಬರಿ |
| ನಮ್ಮ ದೇವರು | ಕಥಾ ಸಂಗ್ರಹ |

### ಬರಲಿವೆ

| | |
|---|---|
| ಮರ್ಯಾದೆಯ ಮುಸುಕಿನಲ್ಲಿ | ಕಾದಂಬರಿ |
| ಸತ್ಯ ದರ್ಶನ | ಕಾದಂಬರಿ |
| ರಂಗದ ಮೇಲೆ | ಕಾದಂಬರಿ |
| ಹುಚ್ಚು ಹೊಳೆ | ಹರಟೆಗಳು |
| ಭಗ್ನ ಪ್ರಣಯಿಗಳು | ಕಥಾ ಸಂಗ್ರಹ |

ಸಾಹಿತ್ಯ ಸೇವಾ ನಿಲಯ ಗೋಕಾಕ